ಾ ಮತ್ತು ಬಾಪು 150ನೇ ವರ್ಷಾಚರಣೆ – ಪುಸ್ತಕ ಮಾಲಿಕೆ

# ಮಹದೇವ ದೇಸಾಯಿ

ಲೇಖಕರು : ವೇಮಗಲ್ ಸೋಮಶೇಖರ್



ಬಾ-ಬಾಪು 150ನೇ




ವರ್ಷಾಚರಣೆ ಪುಸ್ತಕ ಮಾಲಿಕೆ

# ಮಹದೇವದೇಸಾಯಿ

## ವೇಮಗಲ್ ಸೋಮಶೇಖರ್

ಪ್ರಕಾಶಕರು

**ಕರ್ನಾಟಕ ಗಾಂಧೀ ಸ್ಮಾರಕ ನಿಧಿ**

ಗಾಂಧೀ ಭವನ, ಕುಮಾರ ಪಾರ್ಕ್ ಪೂರ್ವ

ಬೆಂಗಳೂರು - 560001, ದೂರವಾಣಿ : 080-22261967

ಮಹದೇವದೇಸಾಯಿ
ಲೇಖಕರು : ವೇಮಗಲ್ ಸೋಮಶೇಖರ್
ಪ್ರಕಾಶಕರು : ಕರ್ನಾಟಕ ಗಾಂಧೀ ಸ್ಮಾರಕ ನಿಧಿ
ಗಾಂಧೀ ಭವನ, ಕುಮಾರ ಪಾರ್ಕ್ ಪೂರ್ವ
ಬೆಂಗಳೂರು – 560001
ದೂರವಾಣಿ : 080–22261967

| | | |
|---|---|---|
| ಮೊದಲ ಮುದ್ರಣ | : | 2019 |
| ಪ್ರತಿಗಳು | : | 1000 |
| ಪುಟಗಳು | : | XII + 76 |
| ಬೆಲೆ | : | 63/– |
| ಮುದ್ರಕರು | : | ಕ್ರಿಯೇಟಿವ್‌ಗೀಕ್ಸ್<br>ಯಾಧವ ಕಾಲೇಜು ರಸ್ತೆ, ಮಾಧವನಗರ<br>ಬೆಂಗಳೂರು – 560001<br>ದೂರವಾಣಿ : 080 40927049 |



## ಅರ್ಪಣೆ

ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ
ಕಾರ್ಯದರ್ಶಿಗಳಾಗಿದ್ದ
**ಸರ್ದಾರ್ ವೆಂಕಟರಾಮಯ್ಯ** ಅವರಿಗೆ
ಗೌರವಪೂರ್ವಕವಾಗಿ



ಕ್ರೆಸೆಂಟ್ ಹೌಸ್‌ನಲ್ಲಿ ಗಾಂಧೀಜಿ ಅವರೊಂದಿಗೆ ಹೈಸ್ಕೂಲ್
ವಿದ್ಯಾರ್ಥಿ ಹೆಚ್. ನರಸಿಂಹಯ್ಯ ಮತ್ತು ಎಡಗಡೆ ಮಹದೇವದೇಸಾಯಿ,
(ದಿ. 11–6–1936)



ಮಹದೇವದೇಸಾಯಿಯವರು ತಮ್ಮ ಪುತ್ರ ನಾರಾಯಣ
ದೇಸಾಯಿಯನ್ನು ಗಾಂಧಿ ಅವರಿಗೆ ತೋರಿಸುತ್ತಿರುವುದು. (1925ರಲ್ಲಿ)

# ನಿಮ್ಮೊಂದಿಗೆ

ಕರ್ನಾಟಕ ಗಾಂಧಿ ಸ್ಮಾರಕ ನಿಧಿಯು ಬಾ ಮತ್ತು ಬಾಪು ಅವರ 150ನೇ ವರ್ಷಾಚರಣೆಯನ್ನು ಅರ್ಥಪೂರ್ಣವಾಗಿ ಆಚರಿಸಲು ಹಾಕಿಕೊಂಡಿರುವ ಹಲವಾರು ಕಾರ್ಯ ಯೋಜನೆಗಳಲ್ಲಿ, ಗಾಂಧೀಜಿ ಅವರ ಚಿಂತನೆಗಳು ಮತ್ತು ತತ್ವ ಸಿದ್ಧಾಂತಗಳುಳ್ಳ ಸಾಹಿತ್ಯವನ್ನು ಪ್ರಕಟಿಸುವುದು, ಪ್ರದರ್ಶಿಸುವುದು ಮತ್ತು ವಿತರಿಸುವುದೂ ಪ್ರಮುಖವಾದುದಾಗಿದೆ. ಅದರಂತೆ ಮಹಾತ್ಮಾ ಗಾಂಧಿ ಅವರೊಂದಿಗೆ ಭಾರತೀಯ ಸಮಾಜ ಕಟ್ಟುವಲ್ಲಿ ಸಕ್ರಿಯವಾಗಿ ಪಾಲ್ಗೊಂಡ ಮಹದೇವದೇಸಾಯಿ ಅವರನ್ನು ಕುರಿತು, ಶ್ರೀ ವೇಮಗಲ್ ಸೋಮಶೇಖರ್ ಅವರು ಬರೆದ "ಮಹದೇವದೇಸಾಯಿ" ಜೀವನ ಚಿತ್ರಣದ ಕೃತಿಯನ್ನು ಪ್ರಕಟಿಸಲು ನನಗೆ ಅತ್ಯಂತ ಹರ್ಷವಾಗುತ್ತದೆ.

ಮಹದೇವದೇಸಾಯಿ ಅವರು ಮಹತ್ಮಾಜಿ ಅವರೊಂದಿಗೆ ರಾಮನ ಭಕ್ತ ಹನುಮಂತನಂತೆ, ರಾಮಕೃಷ್ಣ ಪರಮಹಂಸರಿಗೆ ವಿವೇಕಾನಂದರಿದ್ದಂತೆ ತಮ್ಮ ಜೀವನವನ್ನು ಗಾಂಧೀಜಿ ಅವರಿಗೆ ಸಮರ್ಪಿಸಿಕೊಂಡ ಜೀವನವನ್ನು ಈ ಕೃತಿ ಅನಾವರಣಗೊಳಿಸುತ್ತದೆ. ಗಾಂಧೀಜಿ ಅವರ ಸಮಯಪಾಲನೆ, ಕ್ರಮಬದ್ಧ ಸಾರ್ವಜನಿಕ ಪ್ರತಿಸ್ಪಂದನೆ, ಮತ್ತು ಸಕಾಲಿಕ ಪತ್ರಿಕಾ ವರದಿಗಳ, ಹೇಳಿಕೆಗಳು, ಸತ್ಯಾಗ್ರಹದ ಕರೆಗಳು, ಪ್ರಕಟಣೆಗೊಳ್ಳುತ್ತಿದ್ದವೆಂದರೆ ಅವುಗಳ ಹಿನ್ನೆಲೆಯಲ್ಲಿ ಮಹದೇವದೇಸಾಯಿ ಅವರ ಶ್ರಮ, ವಿದ್ವತ್ತು ಮತ್ತು ಕಾರ್ಯತತ್ಪರತೆಗಳು ಕಾರಣಗಳಾಗಿದ್ದವೆಂಬುದನ್ನು ಗಮನಿಸಬಹುದಾಗಿದೆ. ಗಾಂಧೀಜಿ ಅವರ ದೈನಂದಿನ ಕಾರ್ಯಚಟುವಟಿಕೆಗಳು ಏನಾಗಿದ್ದವು, ಹೇಗಿದ್ದವು? ಎಂದು ವಿಶ್ಲೇಷಿಸಿ, ಅವರನ್ನು ಮತ್ತಷ್ಟು ಹತ್ತಿರದಿಂದ ಅರಿತುಕೊಳ್ಳಲು ಪ್ರಯತ್ನಿಸುವವರಿಗೆ, ಮಹದೇವದೇಸಾಯಿ ಅವರು 1917ರಿಂದ ಅಂದರೆ ಅವರು ಮಹಾತ್ಮಾಜೀ ಅವರ ಕಾರ್ಯದರ್ಶಿ ಆದಾಗಿನಿಂದ ಬರೆದ ಗಾಂಧೀಜಿ ಅವರ ದಿನಚರಿಯೇ ಇಂದಿಗೂ ಪ್ರಮುಖ ಆಖರಗ್ರಂಥವಾಗಿದೆ. ಸ್ವಹಿತವನ್ನು ಕ್ಷಣಮಾತ್ರವೂ ಪರಿಗಣಿಸದೆ, ನಿಸ್ವಾರ್ಥವಾಗಿ, ಪ್ರಾಮಾಣಿಕವಾಗಿ

ಗಾಂಧೀಜಿ ಅವರ ಒಡನಾಡಿಯಾಗಿದ್ದ ಮಹದೇವದೇಸಾಯಿ ಅವರು ಲೇಖಕ, ಸಾಹಿತಿ, ಪತ್ರಕರ್ತ, ಅನುವಾದಕ, ಬಹುಭಾಷಾತಜ್ಞ ಕಾರ್ಯನಿಷ್ಠರಾಗಿದ್ದರಿಂದಲೇ ಗಾಂಧೀಜಿ ಅವರ ಸಾಮಾಜಿಕ–ರಾಜಕೀಯ ಹೋರಾಟಗಳು ಶಿಸ್ತುಬದ್ಧವಾಗಿತ್ತೆಂಬುದು ಗಮನಾರ್ಹವಾದ ಅಂಶ. ಗಾಂಧೀಜಿ ಅವರ ಇಂಥಹ ನಿಸ್ವಾರ್ಥ ಒಡನಾಡಿಗಳ ಜೀವನಚರಿತ್ರೆಗಳು, ವೇಮಗಲ್ ಸೋಮಶೇಖರ್ ಅವರ ಹಸ್ತದಿಂದ ಹರಿದು ಬರಲಿ ಎಂದು ನಾನು ಆಶಿಸುತ್ತೇನೆ.

ಇಂಥಹ ಅಪೂರ್ವ ಕೃತಿಯನ್ನು ಪ್ರಕಟಿಸಲು ಶ್ರಮವಹಿಸಿದ ಗೌ॥ ಕಾರ್ಯದರ್ಶಿಗಳಾದ ಶ್ರೀಮತಿ ಇಂದಿರಾ ಕೃಷ್ಣಪ್ಪ ಅವರಿಗೆ ಆತ್ಮೀಯ ನಮನಗಳು. ಗಾಂಧೀ ಭವನದ ಎಲ್ಲಾ ಸದಸ್ಯರು ಇಂಥಹ ಗಾಂಧಿ ತತ್ವ ಪ್ರಣೀತ ಕಾರ್ಯಕ್ಕೆ ಸಕಲ ಸಹಕಾರವನ್ನು ನೀಡುತ್ತಿರುವುದಕ್ಕೆ ಕೃತಜ್ಞತೆಗಳನ್ನು ತಿಳಿಸುತ್ತೇನೆ.

ಈ ಹೊತ್ತಿಗೆಯನ್ನು ಅಂದವಾದ ವಿನ್ಯಾಸದೊಂದಿಗೆ ಮುದ್ರಿಸಿದ ಕ್ರಿಯೇಟಿವ್ ಗೀಕ್ಸ್‌ನ ಶ್ರೀ ಮಹೇಶ್ ಮತ್ತು ತಂಡದವರಿಗೆ ಗಾಂಧೀ ಭವನದ ಪರವಾಗಿ ನಮನಗಳು ಸಲ್ಲುತ್ತವೆ.

ಬೆಂಗಳೂರು
ಜನವರಿ 23, 2019

ಡಾ. ವೂಡೇ ಪಿ. ಕೃಷ್ಣ
ಅಧ್ಯಕ್ಷರು
ಕರ್ನಾಟಕ ಗಾಂಧೀ ಸ್ಮಾರಕ ನಿಧಿ

# ನಮ್ಮ ನಮ್ಮಲ್ಲಿ

ಬಾ ಮತ್ತು ಬಾಪು ಅವರ 150ನೇ ವರ್ಷಾಚರಣೆಯ ಸುಸಂದರ್ಭದಲ್ಲಿ, ಮಹಾತ್ಮ ಗಾಂಧೀಜಿ ಅವರೊಂದಿಗೆ ಜೀವನಸಂಗಾತಿಯಂತಿದ್ದ ಶ್ರೀ ಮಹದೇವದೇಸಾಯಿ ಅವರ ಕುರಿತಾದ ಕೃತಿಯನ್ನು ಪ್ರಕಟಿಸಲು ಸಂತೋಷವಾಗುತ್ತದೆ. ಈ ಕೃತಿಯನ್ನು ಸಂಶೋಧಕನ ತೆರದಲ್ಲಿ ವಿಷಯಗಳನ್ನು ಸಂಗ್ರಹಿಸಿ, ಪುಸ್ತಕ ರೂಪ ಕೊಟ್ಟ ಸಾಹಿತಿ ಶ್ರೀ ವೇಮಗಲ್ ಸೋಮಶೇಖರ್ ಅವರಿಗೆ ಹಾರ್ದಿಕ ಅಭಿನಂದನೆಗಳು.

ಕನ್ನಡ ಸಾಹಿತ್ಯ ಪ್ರಮುಖವಾಗಿ ಕಥೆ, ಕಾದಂಬರಿ, ಕವನ ಸಂಕಲನ, ಭಾಷಾಶಾಸ್ತ್ರ ಮತ್ತು ಹಾಸ್ಯ ಸಾಹಿತ್ಯ ಇತ್ಯಾದಿಗಳ ವಿಸ್ತಾರವಾದ ಹರವನ್ನು ಹೊಂದಿದೆ. ಪರಿಸರ ಸಾಹಿತ್ಯ, ಪ್ರವಾಸ ಕಥನಗಳು, ವೈದ್ಯಕೀಯ ವಿಜ್ಞಾನ ಮತ್ತು ಆತ್ಮಕಥೆ ಪ್ರಕಾರಗಳೆಂಬ ಸಾಹಿತ್ಯದ ಝರಿಗಳು ಕಳೆದ 70ವರ್ಷಗಳಲ್ಲಿ ಕನ್ನಡ ಸಾಹಿತ್ಯದ ಸಾಗರಕ್ಕೆ ಸೇರಿಕೊಂಡಿವೆ. ಆತ್ಮ ಕಥೆಗಳಲ್ಲಿ ಪ್ರಮುಖವಾಗಿ ನಾವು ಮೂರು ವೈವಿಧ್ಯತೆಯನ್ನು ಕಾಣಬಹುದು. ಸಾಧಕರು ಸ್ವತಹ ಬರೆದ ಅನುಭವ ಕಥನಗಳು ಅಥವ ಆತ್ಮಕಥೆಗಳು ಮತ್ತು ಅನುವಾದಿತ ಆತ್ಮಕಥೆಗಳು, ಸಾಧಕರನ್ನು ಕುರಿತು ಬರೆದ ಜೀವನಚರಿತ್ರೆಗಳು, ಸಾಧಕರ ಆಪ್ತವಲಯದವರು ಬರೆದ ಅಭಿನಂದನಾ ಗ್ರಂಥಗಳು ಮತ್ತು ನುಡಿನಮನಗಳು.

ಕನ್ನಡದಲ್ಲಿ ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರು ಮಹಾತ್ಮಾಜಿ ಅವರ "The story of My Experiment with Truth" ಕೃತಿಯನ್ನು "ಆತ್ಮಕಥೆ ಅಥವಾ ನನ್ನ ಸತ್ಯಾನ್ವೇಷಣೆ" ಎಂದು ಕನ್ನಡಾನುವಾದವನ್ನು ಮಾಡಿರುತ್ತಾರೆ. ಈ ಕೃತಿಯೇ ಕನ್ನಡ ಭಾಷೆಯ ಮೊದಲ ಆತ್ಮಕಥೆ ಎನ್ನಬಹುದಾಗಿದೆ. ತದನಂತರದಲ್ಲಿ ಆತ್ಮಕಥೆ ಪ್ರಕಾರಗಳು ಬಹು ವಿಸ್ತಾರಗೊಂಡಿತು. ಸಾಹಿತಿ ಕಲಾವಿದರ ಸ್ವಾತಂತ್ರ್ಯ ಹೋರಾಟಗಾರರ ಆತ್ಮಕಥೆಗಳು, ವೈಜ್ಞಾನಿಕ, ತಾಂತ್ರಿಕ ಹಾಗೂ ರಾಜಕೀಯ ಮುತ್ಸದ್ದಿಗಳ ಆತ್ಮಕಥೆಗಳು ಹಾಗೂ ಸಮಾಜಮುಖಿ ಜೀವನಕ್ಕೆ ತೆರೆದುಕೊಂಡ ಸಾಧಕರ ಆತ್ಮಕಥೆಗಳು, ಕನ್ನಡ ಸಾಹಿತ್ಯ ಕ್ಷೇತ್ರವನ್ನು ಸಮಾಜಮುಖಿ ಚಿಂತನೆಯೆಡೆಗೆ ಕೊಂಡೊಯ್ದಿದೆ. ಆಶಯವನ್ನು ಜನರಲ್ಲಿ ಬಿತ್ತಿವೆ. 19ನೇ ಶತಮಾನದ ಉತ್ತರಾರ್ಧದಲ್ಲಿ ಮರಾಠಿ, ಉರ್ದು, ತೆಲುಗು

ಇತ್ಯಾದಿ ಭಾಷೆಗಳಿಂದ ಅನುವಾದವಾದ ಆತ್ಮಕಥೆಗಳ ಸರಣಿಗಳು, ಕನ್ನಡ ಸಾಹಿತ್ಯದ ಹೆಬ್ಬಾಗಿಲನ್ನು ಮುಕ್ತವಾಗಿಸಿತು. ಮರಾಠಿಯಿಂದ ಅನುವಾದವಾದ 'ಅಕ್ರಮ ಸಂತಾನ' ಮತ್ತು 'ಭಂಗಿ ಜನಗಳ ಕಥೆಗಳು', ಹೊಸ ಅಲೆಯನ್ನು ಸೃಜಿಸಿದವು. ಜಮೀಲಾ, ಮಾನವ ಎಚ್ಚೆತ್ತಾಗ (ಗೋದಾವರಿ ಪುರುಳೇಕರ), ಬಲೂತ (ದಯಾ ಪವಾರ್), ರಸೀದಿ ಟಿಕೇಟ್ (ಅಮೃತಾ ಪ್ರೀತಮ್), ಕೃತಿಗಳೂ ಅನುವಾದವಾದ ಕೃತಿಗಳಾಗಿವೆ. ಅದರಂತೆ ಜವಹರಲಾಲ್ ನೆಹರು, ಡಾ. ರಾಜೇಂದ್ರ ಪ್ರಸಾದ್, ಬಾಬರ್, ನಂಬೂದರಿ ಪಾಡ್, ತೇನ್‌ಸಿಂಗ್, ಡಾರ್ವಿನ್, ಹೆಲೆನ್ ಕೆಲ್ಲರ್ ಇನ್ನೂ ಮುಂತಾದವರ ಜೀವನ ಕಥೆಗಳು ಕನ್ನಡಕ್ಕೆ ಅನುವಾದಿತವಾದ ಆತ್ಮಕಥೆಗಳಾಗಿವೆ.

ಶ್ರೀ ವೇಮಗಲ್ ಸೋಮಶೇಖರ್ ಅವರ "ಮಹದೇವದೇಸಾಯಿ" ಅವರ ಈ ಕೃತಿ, ಒಂದು ದೃಷ್ಟಿಯಿಂದ ಆತ್ಮಕಥೆ ಪ್ರಕಾರದಲ್ಲಿನ ಜೀವನಚರಿತ್ರೆಯೂ ಹೌದು; ಮತ್ತೊಂದು ದೃಷ್ಟಿಯಿಂದ ನುಡಿನಮನ ಹೊತ್ತಿಗೆಯಂತೆ ಬಹು ವಿಶಿಷ್ಟವಾಗಿದೆ. ಇದರಲ್ಲಿ ಮಹದೇವ ಅವರ ಮುಖಾಂತರ ಮಹಾತ್ಮಾಜೀ ಅವರ ಹಲವು ವಿಶಿಷ್ಠ ಗುಣಗಳಾದ ಶಿಸ್ತು, ಸಮಯ ಪರಿಪಾಲನೆ, ಸ್ವಾವಲಂಬನೆಗಳು ಅಭಿವ್ಯಕ್ತವಾಗುವಂತೆಯೇ, ಅವರ ಹಾಸ್ಯ, ಕೋಪ, ಸರಳ ಓದುವಿಕೆ ಇತ್ಯಾದಿ ಸ್ವಭಾವಗಳು ಅನಾವರಣಗೊಳ್ಳುತ್ತವೆ. ದೇಸಾಯಿ ಅವರು, ಮಹಾತ್ಮಾಜೀ ಅವರಲ್ಲಿ ತನ್ನನ್ನೇ ಸಮರ್ಪಿಸಿಕೊಂಡ ಪರಿ ಅನನ್ಯವಾದುದಾಗಿದೆ. ಗಾಂಧೀಜಿ ಒಡನಾಟದ ಸುಮಾರು 27 ವರ್ಷಗಳ ಅವರ ಜೀವನ ಪರ್ಯಟನವನ್ನು ಹಲವು ಘಟನೆಗಳು, ಕೆಲವು ಚರ್ಚೆಗಳು ಮತ್ತು ಪ್ರಮುಖ ವ್ಯಕ್ತಿಗಳ ನುಡಿಗಳ ಮುಖಾಂತರ ನಮಗೆ ಲೇಖಕರು ಕಟ್ಟಿಕೊಟ್ಟಿದ್ದಾರೆ. ಹಾಗಾಗಿ ಇದು ಕನ್ನಡ ಸಾಹಿತ್ಯದ ಜೀವನ ಚರಿತ್ರೆ ವಿಭಾಗದಲ್ಲಿ ಅಪೂರ್ವ ಕೃತಿಯಾಗಿದೆ.

ಈ ಕೃತಿಯನ್ನು ಮುದ್ರಣಗೊಳಿಸಿ ಪ್ರಕಟಿಸಲು ಸಹಕರಿಸಿದ ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಎಲ್ಲಾ ಸದಸ್ಯರುಗಳಿಗೂ ಕೃತಜ್ಞತೆಗಳು ಸಲ್ಲುತ್ತವೆ. ಇಂಥಹ ಅಪೂರ್ವ ಕೃತಿಗಳನ್ನು ಈ ವರ್ಷಾಚರಣೆಯಲ್ಲಿ ಪ್ರಕಟಿಸಲು ಸದಾ ಉತ್ಸುಕರಾಗಿರುವ ಗಾಂಧೀ ಭವನದ ಅಧ್ಯಕ್ಷರಾಗಿರುವ ಡಾ. ವೂಡೇ ಪಿ. ಕೃಷ್ಣ ಅವರಿಗೆ ಹೃತ್ಪೂರ್ವಕ ವಂದನೆಗಳನ್ನು ಸಲ್ಲಿಸುತ್ತೇನೆ. ಇದನ್ನು ಅಂದವಾಗಿ ಮುದ್ರಿಸಿದ ಕ್ರಿಯೇಟಿವ್‌ಗೀಕ್ಸ್‌ನ ಮಹೇಶ್ ಮತ್ತು ತಂಡಕ್ಕೆ ಆತ್ಮೀಯ ನಮನಗಳು.

ಇಂದಿರಾ ಕೃಷ್ಣಪ್ಪ
ಗೌ॥ ಕಾರ್ಯದರ್ಶಿ

# ಲೇಖಕರ ಮಾತು

ಮಹಾತ್ಮ ಗಾಂಧೀಜಿ ಬರೆದಿರುವ 'ಆತ್ಮ ಕಥೆ ಅಥವಾ ನನ್ನ ಸತ್ಯಾನ್ವೇಷಣೆ' ಕೃತಿಯನ್ನು ಆಗಾಗ್ಗೆ ಓದುತ್ತಿದ್ದ ನಾನು ಸತ್ಯ ಅಹಿಂಸೆಯಿಂದ ಕೂಡಿದ್ದ ಅವರ ಸರಳ ಜೀವನಕ್ರಮದಿಂದ ಪ್ರೇರೇಪಿತನಾದೆ. ನಂತರದಲ್ಲಿ ಅವರ ಜೊತೆಯಲ್ಲಿಯೇ ಇದ್ದ ಹಲವಾರು ಗಣ್ಯರ (ವಿದೇಶೀಯರೂ ಸೇರಿದಂತೆ) ಜೀವನ ಚರಿತ್ರೆಯನ್ನೂ ಓದಬೇಕೆನಿಸಿತು. ಗಾಂಧಿ ಅವರ ಜೊತೆ ಕೆಲಸ ಮಾಡಬೇಕೆಂದರೆ ಅಷ್ಟು ಸುಲಭದ ಮಾತಾಗಿರಲಿಲ್ಲ. ಅದರಲ್ಲೂ ಅವರಿಗೆ ಆಪ್ತರಾದವರು ಆಶ್ರಮಕ್ಕೆ ಬಂದರೆ ಮೊದಲು ಮಾಡಬೇಕಾಗಿದ್ದ ಕೆಲಸ "ಭಂಗಿ ಕೆಲಸ". ಆಶ್ರಮದಲ್ಲಿದ್ದ ಇನ್ನೂ ಕೆಲವು ನಿಯಮಗಳನ್ನು ಅವರೆಲ್ಲರೂ ಹೇಗೆ ನಿಭಾಯಿಸಿದರು ಎಂಬುದನ್ನು ತಿಳಿದುಕೊಳ್ಳಬೇಕೆಂಬ ಹಂಬಲ ನನ್ನನ್ನು ಕಾಡುತ್ತಿತ್ತು. ಶೌಚಗೃಹವನ್ನು, ಅಡಿಗೆ ಮನೆಗಳ ಹಾಗೆಯೇ ಶುಚಿಯಾಗಿಟ್ಟುಕೊಳ್ಳಬೇಕೆಂದು ಗಾಂಧೀಜಿ ಹೇಳುತ್ತಿದ್ದರು. ಸ್ವಚ್ಛತೆ ಇಲ್ಲದೆ ಇರುವುದೇ ರೋಗ ಹರಡುವುದಕ್ಕೆ ಕಾರಣ ಎಂದು ಗಾಂಧೀಜಿ ಎಲ್ಲೇ ಹೋದರೂ ಮೊದಲು ನೋಡುತ್ತಿದ್ದುದು ಅಲ್ಲಿನ ಶೌಚ ಗೃಹ. ಆ ಶೌಚಗೃಹ ಶುಚಿಯಾಗಿಲ್ಲದಿದ್ದಲ್ಲಿ ಅವರೇ ಸ್ವತಃ ಶುಚಿ ಮಾಡಿರುವ ನಿದರ್ಶನಗಳೂ ಇವೆ.

ಗಾಂಧೀಜಿಗೆ ಆಪ್ತರಾದ ಅನೇಕ ಕೋಟ್ಯಾಧೀಶರೂ ಸಹ ಗಾಂಧಿ ಅವರಂತೆ ಸರಳ ಜೀವನ ನಡೆಸುತ್ತಾ ಖಾದಿ ಉಡುಗೆಯನ್ನೇ ಧರಿಸಿದರು. ಕೊನೆಗೆ ರಾಷ್ಟ್ರಮಟ್ಟದಲ್ಲೂ ಮತ್ತು ಅಂತರರಾಷ್ಟ್ರೀಯ ಮಟ್ಟದಲ್ಲೂ ಪ್ರಸಿದ್ಧರಾದರು. ಈ ಕಾರಣಗಳಿಂದ ನಾನು ಗಾಂಧಿ ಅವರ ಜೊತೆಯಲ್ಲಿದ್ದವರೆಲ್ಲರ ಜೀವನ ಚರಿತ್ರೆಯನ್ನು ಓದಲು ಪ್ರಾರಂಭಿಸಿದೆ. ಕೊನೆಗೆ ಅವರೆಲ್ಲರ ಕಿರು ಪರಿಚಯದ ಕೃತಿಯನ್ನು ರಚಿಸಬೇಕೆಂದು ಪ್ರಯತ್ನಿಸಿದೆ. ಅಂಥಹ ಪ್ರಯತ್ನದ ಫಲವೇ 'ಮಹದೇವದೇಸಾಯಿ' ಎಂಬ ಈ ಮೊದಲ ಕಿರು ಕೃತಿ. ಬಾ–ಬಾಪು ಅವರ 150ನೇ

ವರ್ಷಾಚರಣೆ ಆಚರಿಸುತ್ತಿರುವ ಸಂದರ್ಭದಲ್ಲಿ ಈ ನನ್ನ ಕೃತಿ ಲೋಕಾರ್ಪಣೆಯಾಗುತ್ತಿರುವುದು ಸಂತಸದ ಸಂಗತಿ.

ಪ್ರಸ್ತುತ ಈ ಕೃತಿ ಪ್ರಕಟವಾಗಲು ಪ್ರೋತ್ಸಾಹಿಸಿದ ಗಾಂಧೀ ಭವನದ ಅಧ್ಯಕ್ಷರಾದ ಗೌರವಾನ್ವಿತ ಡಾ. ವೂಡೇ ಪಿ. ಕೃಷ್ಣ, ಉಪಾಧ್ಯಕ್ಷರಾದ ಪ್ರೊ. ಜಿ. ಬಿ. ಶಿವರಾಜು, ಎ. ಎನ್. ತಿಪ್ಪನಗೌಡರು ಮತ್ತು ಗೌ॥ಕಾರ್ಯದರ್ಶಿಗಳಾದ ಇಂದಿರಾ ಕೃಷ್ಣಪ್ಪ, ಹಾಗೂ ಸಹಾಯಕ ಕಾರ್ಯದರ್ಶಿಗಳಾದ ಎಚ್. ಯೋಗೇಶ್ ಅವರಿಗೂ ಅಭಿನಂದನೆಗಳನ್ನು ಸಲ್ಲಿಸುತ್ತೇನೆ. ಹಸ್ತಪ್ರತಿಯನ್ನು ತಿದ್ದುಪಡಿ ಮಾಡಿಕೊಟ್ಟ ಆತ್ಮೀಯರಾದ ಶ್ರೀ ಎಸ್. ರಾಜೇಂದ್ರಪ್ಪ ಮತ್ತು ಇಂದಿರಾ ಕೃಷ್ಣಪ್ಪ ಅವರೂ ಹಾಗೂ ಬೆನ್ನುಡಿ ಬರೆದು ಕೊಟ್ಟ ಪ್ರೊ.ಕೆ. ಆರ್. ನರಸಿಂಹನ್ ಅವರಿಗೆ ನಾನು ಅಭಾರಿಯಾಗಿದ್ದೇನೆ. ಈ ಕೃತಿ ಹೊರ ಬರಲು ಸಹಕರಿಸಿದ ನನ್ನ ಕುಟುಂಬದವರೆಲ್ಲರಿಗೂ ಹಾಗೂ ಆಪ್ತರಾದ ಶ್ರೀ ಕೆ. ಧನಪಾಲ್ ಅವರಿಗೆ ನನ್ನ ನಮನಗಳು. ಅಂದವಾಗಿ ಮುದ್ರಿಸಿಕೊಟ್ಟ ಕ್ರಿಯೇಟಿವ್‌ಗೀಕ್ಸ್‌ನ ಮಹೇಶ್ ಹಾಗೂ ಸಿಬ್ಬಂದಿಯವರಿಗೂ ಧನ್ಯವಾದಗಳು.

ವೇಮಗಲ್ ಸೋಮಶೇಖರ್

# 160,'ದೀಪ' ನಾಲ್ಕನೇ ತಿರುವು
ಲಕ್ಷ್ಮೀಪುರ, ಕೆಂಪೇಗೌಡ ನಗರ
ಬೆಂಗಳೂರು–19
ಮೋ: 9901562292

# ಪರಿವಿಡಿ

# ಮಹದೇವದೇಸಾಯಿ

ನಾವು ಸ್ವಾತಂತ್ರ್ಯ ದಿನಾಚರಣೆಯನ್ನು ವಿಜೃಂಭಣೆಯಿಂದ ಆಚರಿಸುವ ಆಗಸ್ಟ್ 15ರ ಶುಭ ದಿನವನ್ನು ಸಹಜವಾಗಿ ಉತ್ಸಾಹ ಹಾಗೂ ಸಂತೋಷವನ್ನು ಅನುಭವಿಸುತ್ತೇವೆ. ಆದರೆ ಸ್ವಾತಂತ್ರ್ಯಗಳಿಸುವುದಕ್ಕಾಗಿ ಮಾಡಿ ಮಡಿದ ನೂರಾರು ಬಲಿದಾನಗಳನ್ನು ಮರೆಯುತ್ತೇವೆ. ಅಂತಹ ಬಲಿದಾನದ ಮೂರ್ತಿಗಳಲ್ಲಿ ಮಹದೇವದೇಸಾಯಿ ಅವರೂ ಒಬ್ಬರು. ಗಾಂಧೀಜಿಯ ಕೊನೆಯ ಮಹಾ ಸಂಗ್ರಾಮವಾದ 'ಭಾರತ ಬಿಟ್ಟು ತೊಲಗಿ' ಚಳವಳಿಯಲ್ಲಿ ಗಾಂಧೀಜಿಯ ಜೊತೆಯಲ್ಲಿಯೇ ಮಹದೇವದೇಸಾಯಿಯೂ ಪೂನಾದ ಅಗಾಖಾನ್ (ಅರಮನೆ) ಸೆರೆಮನೆ ಸೇರಿ ಮಹಾತ್ಮರ ಪದತಲದಲ್ಲಿ ಸೇವಾ ದೀಕ್ಷೆಯಲ್ಲಿದ್ದಾಗಲೇ 1942ರ ಆಗಸ್ಟ್ 15 ರಂದು ಹಠಾತ್‌ನಿಧನ ಹೊಂದಿದರು. ಗಾಂಧೀಜಿಯ ಜೀವನದಲ್ಲಿ ಮತ್ತೆ ಆ ಜಾಗವನ್ನು ತುಂಬಲು ಯಾರಿಂದಲೂ ಸಾಧ್ಯವಾಗಲೇ ಇಲ್ಲ. ಅಂತಹ ಮಹದೇವದೇಸಾಯಿ ಅವರನ್ನು ಇಂದಿನ ಸಮಾಜ ಮರೆತಿದೆ. ಗಾಂಧೀಜಿ ಅವರ ಸಾಮಾಜಿಕ ಜೀವನದ ಸಹವರ್ತಿಯಾಗಿ ಮತ್ತು ಮೂಲ ಚೇತನವೇ ಆಗಿದ್ದ ಮಹದೇವ ಅವರನ್ನು ನೆನೆಪಿಸಿಕೊಳ್ಳುವುದು ಅಗತ್ಯವಾಗಿದೆ.

ದಕ್ಷಿಣ ಆಫ್ರಿಕಾದ ಜನತಾ ಹೋರಾಟಗಳಲ್ಲಿ 21ವರ್ಷಗಳ ಕಾಲ ಸತ್ಯಾಗ್ರಹದ ಅಸ್ತ್ರವನ್ನು ಯಶಸ್ವಿಯಾಗಿ ಪ್ರಯೋಗಿಸಿ 1915ರ ಜನವರಿ ಒಂಬತ್ತರಂದು ಭಾರತಕ್ಕೆ ಹಿಂತಿರುಗಿದ ಗಾಂಧೀಜಿ ಅಹಮದಾಬಾದಿನಲ್ಲಿ ನೆಲೆಸಿ ಜಗತ್ತಿನಲ್ಲೇ ವಿಶಿಷ್ಟವೆನ್ನಬಹುದಾದ ಅಹಿಂಸಾತ್ಮಕ ಸತ್ಯಾಗ್ರಹಾಶ್ರಮವನ್ನು ಪ್ರಥಮವಾಗಿ ಪ್ರಾರಂಭಿಸಿದರು. . ಆ ಆಶ್ರಮದಲ್ಲಿ ಹೊಸ ಜೀವನದ ಹಾದಿಯ ಬೆಳಕಿನಲ್ಲಿ ಸಾಗಲು ಹಲವು ಕಠಿಣ ನಿಯಮಗಳನ್ನೊಳಗೊಂಡ ಸತ್ಯ, ಅಹಿಂಸಾನಿಷ್ಠತೆ ಹಾಗೂ ಸೇವಾಮಯ ಸರಳ ದಿನಚರಿ ಕಡ್ಡಾಯವಾಗಿತ್ತು. ಏನನ್ನೂ ಕೂಡಿಡದೆ ಇರುವುದು, ಏನನ್ನೂ ಬಯಸದೆ ಇರುವುದು, ಬ್ರಹ್ಮಚರ್ಯ ಮುಂತಾದ ಆದರ್ಶಗಳನ್ನೂ ಆಧುನಿಕ ಸಮಾಜದಲ್ಲಿ ಹೇಗೆ ಅನುಷ್ಠಾನಗೊಳಿಸಬೇಕೆಂಬ

ಪ್ರಾಯೋಗಿಕ ಸಂಶೋಧನೆಗಳೂ ನಡೆಯುತ್ತಿತ್ತು. ಅದಕ್ಕೆ ಪೂರಕವಾಗಿ ಕಷ್ಟಪಟ್ಟು ಕೆಲಸ ಮಾಡುವುದು, ಎಲ್ಲ ಧರ್ಮಗಳನ್ನು ಸಮಾನವಾಗಿ ಕಾಣುವುದು, ನಮ್ಮ ದೇಶದಲ್ಲಿಯೇ ಸಿದ್ಧವಾದ ವಸ್ತುಗಳನ್ನೇ ಬಳಸುವುದು, ಅಸ್ಪೃಶ್ಯತೆಯ ನಿವಾರಣೆ ಮತ್ತು ಯಾವ ಭಯವೂ ಇಲ್ಲದಿರುವುದು ಮುಖ್ಯ ಪಂಚ ಮಹಾವ್ರತಗಳು ಸತ್ಯಾಗ್ರಹಾಶ್ರಮಕ್ಕೆ ವಿಶಿಷ್ಟವಾಗಿದ್ದವು. ಗಾಂಧಿ ಅವರ ಈತತ್ವಗಳಲ್ಲಿ ಸಂಪೂರ್ಣವಾಗಿ ಲೀನವಾಗಿ ಬಹಳಷ್ಟು ಜನ ತಮ್ಮ ಜೀವನವನ್ನೇ ತಾಯ್ನಾಡಿನ ಸೇವೆಗೆ ಮುಡಿಪಾಗಿಟ್ಟಿದ್ದರು. ಅಂತಹ ಪ್ರಖರ ಬುದ್ಧಿಜೀವಿಗಳಲ್ಲಿ ಮಹದೇವದೇಸಾಯಿ ಅಗ್ರಗಣ್ಯರು. ಗಾಂಧೀಜಿಯ ಸಾನ್ನಿಧ್ಯ ಅವರ ಬಾಳನ್ನೇ ಪರಿವರ್ತಿಸಿತು. ಅವರ ನೆನಪು ಸ್ವಾತಂತ್ರ್ಯದ ಸುಖಾನಂದದಿಂದ ತುಂಬಿದೆ.

25 ವರ್ಷದ ತುಂಬು ಯೌವನದಲ್ಲಿ (1917) ತನ್ನ ಜೀವನವನ್ನು ಬಾಪೂಜಿಯವರಿಗೆ ಸಮರ್ಪಿಸಿದ ಮಹದೇವದೇಸಾಯಿ ಕೊನೆಯ ಉಸಿರಿರುವವರೆಗೂ (25 ವರ್ಷಗಳ ಕಾಲ) ಗಾಂಧಿ ಅವರಿಗೆ ಬಲಗೈ ಭಂಟರಾಗಿದ್ದು, ಪುತ್ರನಾಗಿ, ಮಿತ್ರನಾಗಿ ಅದಕ್ಕೂ ಮಿಗಿಲಾಗಿ ಆಪ್ತ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸಿದರು.

ಮಹದೇವರ ತಂದೆ ಹರಿಭಾಯಿ ದೇಸಾಯಿ. ತಾಯಿ ಜಮುನಾ ಬಾಯಿ. ಗುಜರಾತಿನ ಸೂರತ್ ಜಿಲ್ಲೆಯ ಉಲಪಾಡ್ ತಾಲ್ಲೂಕಿನ ಸರಸ್ ಎಂಬ ಕುಗ್ರಾಮದಲ್ಲಿ 1892ರ ಜನವರಿ ಒಂದರ ಶುಕ್ರವಾರದಂದು ಮಹದೇವರು ಜನಿಸಿದರು. ಮೂರು ಕಂಕುಳ ಗಂಡು ಮಕ್ಕಳನ್ನು ಕಳೆದುಕೊಂಡಿದ್ದ ಜಮುನಾ ಬಾಯಿ ದೇವರನ್ನು ಪೂಜಿಸಿದ ಫಲವಾಗಿ ನಾಲ್ಕನೆಯ ಮಗು ಹುಟ್ಟಿದ್ದರಿಂದ 'ಮಹದೇವ'ನೆಂದು ಹೆಸರಿಟ್ಟಳು. ಆಗ ಅಲ್ಲಿದ್ದ ಪ್ರಾಥಮಿಕ ಶಾಲೆಯಲ್ಲಿ ತಂದೆ ಹರಿಭಾಯಿ ದೇಸಾಯಿ ಹತ್ತು ರೂಪಾಯಿ ತಿಂಗಳ ವೇತನದ ಅಧ್ಯಾಪಕರಾಗಿ ಕಾರ್ಯ ನಿರ್ವಹಿಸುತ್ತಿದ್ದರು. ತಾಯಿ ಜಮುನಾ ಬಾಯಿ ಹಿರಿಯ ಮನೆತನದ ಹೆಣ್ಣು ಮಗಳು. ಆಕೆಯ ರೂಪ, ತಂದೆಯ ಮೈಕಟ್ಟು ಹೊಂದಿದ್ದ ಮಹದೇವರು ಸ್ಫುರದ್ರೂಪಿ. ಎತ್ತರದ ಆಳು. ದುಂಡನೆಯ ಸೌಮ್ಯ ಮುಖ, ಸದಾ ಹಸನ್ಮುಖಿ. ನೋಡಿದೊಡನೆ

ಸ್ನೇಹದ ಮೋಡಿಯನ್ನು ಪಸರಿಸುತ್ತಿದ್ದ ಅಪರೂಪ ವ್ಯಕ್ತಿತ್ವ. ಆದರೆ ಏಳು ವರ್ಷದ ಬಾಲಕನಾಗಿದ್ದಾಗಲೇ ತಾಯಿ ಜಮುನಾ ಬಾಯಿ ತೀರಿಕೊಂಡರು. ನಂತರ ಹರಿಬಾಯಿ ದೇಸಾಯಿ ಎರಡನೇ ಮದುವೆಯಾದರು. ಅಜ್ಜಿ ಮತ್ತು ತಂದೆಯ ಪಾಲನೆಯಲ್ಲಿ ಬೆಳೆಯುತ್ತಾ ದೈವಭಕ್ತನಾದ ಬಾಲಕ ಮಹದೇವರು, ಮಹಾಜ್ಞಾನಿಯಾದರು.

## ಶಿಕ್ಷಣ

1901ರಲ್ಲಿ ಪ್ರಾಥಮಿಕ ಶಾಲೆಯಿಂದ ಇಂಗ್ಲಿಷ್ ತರಗತಿಗಳಿಗೆ ಸೇರಲು ಪಕ್ಕದ ದಿಹೇನ್ ಗ್ರಾಮಕ್ಕೆ ಮಹದೇವರು ಹೋಗಬೇಕಾಯಿತು. ಅಲ್ಲಿ ಮೆಟ್ರಿಕ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ್ದ ಮುನಿಶಂಕರ್ ಎಂಬುವರು ಇಂಗ್ಲಿಷ್ ತರಗತಿ ತೆರೆದಿದ್ದರು. ಆ ತರಗತಿಗೆ ಸೇರಿದ ಮಹದೇವರಿಗೆ ಅಲ್ಲಿನ ಕ್ರಮಬದ್ಧ ಶಿಕ್ಷಣ; ಇಂಗ್ಲಿಷ್ ಭಾಷಾಪ್ರಭುತ್ವಕ್ಕೆ ಒಳ್ಳೆಯ ಬುನಾದಿ ಹಾಕಿತು. ಜೊತೆಗೆ ಧರ್ಮ, ನೀತಿ, ಪ್ರಾರ್ಥನೆ, ಪುರಾಣೇತಿಹಾಸಗಳ ಶಿಕ್ಷಣವೂ ಗುರು ಮುನಿಶಂಕರ್ ಅವರ ಆಶ್ರಯದಲ್ಲಿ ದೊರೆಯಿತು. 1903ರಲ್ಲಿ ಸೂರತ್ ಪ್ರೌಢಶಾಲೆಗೆ ಸೇರಿದ ಇವರಿಗೆ ಗ್ರಾಮಗಳಲ್ಲಿನ ಬಾಲಕ ವೃಂದದ ಕೆಲವು ಕೀಳು ಅಭಿರುಚಿಗಳು ಅಸಹ್ಯವಾಯಿತು. ಮದ್ಯಪಾನಕ್ಕೆ ಬಲಿಯಾಗಿದ್ದವರನ್ನು ಕಂಡು ಮನಸ್ಸು ರೋಸಿಹೋಗುತ್ತಿತ್ತು. ಸಮಾನ ವಯಸ್ಸಿನ ಬಾಲಕರ ತಂಡವೊಂದನ್ನು ಕಟ್ಟಿ ಅವರಿಗೆ ತಿಳಿಹೇಳುವ ಪ್ರಯತ್ನ ಮಾಡಿ ಸಫಲರಾಗದೆ ವ್ಯಾಕುಲ ಪಡುತ್ತಿದ್ದ ಮಹದೇವರಿಗೆ ತಮ್ಮ ಸುತ್ತಲೂ ಯಾವುದೋ ಅನಿಷ್ಟ ಪ್ರಭಾವದಿಂದ ಒಳ್ಳೆಯ ಜೀವನ ಅಳಿಸಿ ಹೋಗುತ್ತಿರುವಂತೆ ಭಾಸವಾಗುತ್ತಿತ್ತು. ಮೃದು ಸ್ವಭಾವದ ಬಾಲಕ ಮಹದೇವ ನಾಚಿಕೆಯಿಂದಾಗಿ ದೂರ ಸರಿದು 'ಇದೇಕೆ ಹೀಗೆ?' ಎಂದು ಒಮ್ಮೊಮ್ಮೆ ವಿಚಾರ ಮಗ್ನರಾಗುತ್ತಿದ್ದರು. ಚಿಕ್ಕಂದಿನಿಂದಲೂ ಇವರು ವ್ಯಾಸಂಗ ಪ್ರಿಯ. ವ್ಯಾಯಾಮದಲ್ಲಿ ಆಸಕ್ತಿ ಗಂಟೆಗಟ್ಟಲೆ ಧರ್ಮ, ಹಾಗೂ ಸಾಹಿತ್ಯ ಗ್ರಂಥಗಳನ್ನು ಓದುವ ಹವ್ಯಾಸ ರೂಢಿಸಿಕೊಂಡಿದ್ದರು.

ಹದಿಮೂರನೇ ವಯಸ್ಸಿನ ಮಹದೇವರಿಗೆ 12ವರ್ಷ ವಯಸ್ಸಿನ ಸತ್ಕುಲ ಪ್ರಸೂತೆ ದುರ್ಗಾ ಬೆಹನ್‌ಳೊಂದಿಗೆ 1905ರಲ್ಲಿ ವಿವಾಹ ನೆರವೇರಿತು. ಕೇವಲ ಆರನೆಯ ಇಯತ್ತೆವರೆಗೆ ಓದಿದ್ದ ಆಕೆ ಸಹಜ ಸತ್ಸಂಸ್ಕಾರಿಯಾಗಿದ್ದರಿಂದ ಬಲು ಬೇಗ ಮಹದೇವರ ಕುಟುಂಬ ವರ್ಗದ ಮೆಚ್ಚುಗೆಗೆ ಪಾತ್ರರಾದರು.

## ಕಾಲೇಜು ಶಿಕ್ಷಣ

ಮಹದೇವ ಅವರು ಮೆಟ್ರಿಕ್ಯುಲೇಷನ್ ಪರೀಕ್ಷೆ 1906ರಲ್ಲಿ ಮುಗಿಸಿ 1907ರಲ್ಲಿ ಮುಂಬಯಿಯ ಎಲ್ಫಿನ್‌ಸ್ಟನ್ ಕಾಲೇಜಿಗೆ ಸೇರಿದರು. ಗೋಕುಲದಾಸ್ ತೇಜಪಾಲ್ ಅವರ ಉಚಿತ ವಿದ್ಯಾರ್ಥಿ ನಿಲಯದಲ್ಲಿ ವಾಸ. ಯಾವ ಕೀಳ್ತನದ ವರ್ತನೆಯೂ ಅವರ ಬಳಿ ಸುಳಿಯುತ್ತಿರಲಿಲ್ಲ. ಆಟ, ಕುಣಿತ ಕುಪ್ಪಳಿಕೆಗಳಲ್ಲಿ ಹೆಚ್ಚು ಆಸಕ್ತಿ ಇಲ್ಲದಿದ್ದರೂ ತಿಳಿಹಾಸ್ಯ ವಿನೋದಗಳತ್ತ ಒಲವಿತ್ತು. ಬಿಡುವಾದಾಗಲೆಲ್ಲಾ ಸಾರ್ವಜನಿಕ ಪುಸ್ತಕ ಭಂಡಾರಗಳಲ್ಲಿ ಓದುತ್ತಾ ಗಂಟೆಗಟ್ಟಲೆ ಕಾಲ ಕಳೆಯುತ್ತಿದ್ದರು.

ಗುಜರಾತ್ ಸಾಧುಸಂತರ ಪರಂಪರೆಗೆ ಹೆಸರಾದ ಪ್ರದೇಶ. ಮಹದೇವರಿಗೆ ಒಬ್ಬ ಸಂತನ ಪರಿಚಯವಾಯಿತು. ಅವರ ಹೆಸರು ಪುರುಷೋತ್ತಮ ಸೇವಕರಾಮ್. ಮಹದೇವರಿಗೆ ಅವರಲ್ಲಿ ಅಪಾರ ಭಕ್ತಿ-ಗೌರವಗಳು ಬೆಳೆದವು. ಪ್ರೌಢಶಾಲಾ ವಿದ್ಯಾರ್ಥಿಯಾಗಿದ್ದಾಗಲೇ ಅವರ ಪ್ರಭಾವ ಮನದಲ್ಲಿ ಆಳವಾಗಿ ಬೇರೂರಿತು. ಆದಾಗಲೇ ಅತ್ಯುನ್ನತ ಅಧ್ಯಾತ್ಮ ಪ್ರಗತಿಯನ್ನು ಸಾಧಿಸಿದ್ದ ಮಹದೇವರಿಗೆ ಆ ಸಂತನ ಸಹವಾಸದಿಂದ ನಮ್ರತೆ, ಸೇವಾಮನೋವೃತ್ತಿ, ಈಶ್ವರ ಶ್ರದ್ಧೆ ಹಾಗೂ ಜೀವನ ಸರಳತೆಗಳು ಸೇರಿಕೊಂಡು ಹರಳಗಟ್ಟಿದ್ದವು.

# ವೃತ್ತಿ ಪ್ರಾರಂಭ

ಸ್ನಾತಕೋತ್ತರ ಶಿಕ್ಷಣದಲ್ಲಿ ಸಂಸ್ಕೃತ ಹಾಗೂ ತತ್ವಶಾಸ್ತ್ರಗಳನ್ನೋದುವ ಹಂಬಲ ಅವರದಾಗಿತ್ತು. ಆದರೆ ಸೇರಿದ್ದು ಕಾನೂನು ಅಭ್ಯಾಸದ ತರಗತಿಗೆ. ತಂದೆಗೆ ಶಿಕ್ಷಣ ವೆಚ್ಚದ ಭಾರ ಬೀಳದಂತೆ ಕಾನೂನು ಅಭ್ಯಾಸ ಮಾಡುತ್ತಾ ಮುಂಬಯಿನ ಪ್ರಾಚ್ಯ ಸಂಶೋಧನಾ ಸಂಸ್ಥೆಯ ಭಾಷಾಂತರ ವಿಭಾಗದಲ್ಲಿ 60ರೂಪಾಯಿ ವೇತನದ ಕೆಲಸಕ್ಕೆ ಸೇರಿ ಸಂಸಾರ ಹೂಡಿದರು. ಇದರಿಂದಾಗಿ ಸಂಸಾರ ನಿರ್ವಹಣೆ ಸಮಸ್ಯೆ ಸುಧಾರಿಸಿತು.

ಮುಂಬಯಿಯ ಪರೇಲಿಯ ಬಡಜನರ ವಠಾರದಲ್ಲಿ ವಾಸಮಾಡುತ್ತಿದ್ದ ಮಹದೇವರಿಗೆ ಆ ಮಹಾನಗರದ ಬಡ ಕಾರ್ಮಿಕರ ಜೀವನ, ಅನುಭವಕ್ಕೆ ಬಂದಿತು. ಕರುಣೆಯಿಂದ ಅನೇಕರ ಸಹಾಯಕ್ಕೆ ಧಾವಿಸುತ್ತಿದ್ದರು. ಆಗ ಮಹದೇವರಿಗೆ ಕೆಲವು ಕಹಿ ಅನುಭವಗಳೂ ಆದವು. ಖುಷಿಯಾಗಿ ದೈಹಿಕ ಸುಖಗಳನ್ನು ಅನುಭವಿಸುವುದೇ ಅಲ್ಲಿನ ಜನರ ಗುರಿಯಾಗಿತ್ತು. ನ್ಯಾಯ-ನೀತಿಗಳಿಗೆ ಅವರು ಲಕ್ಷ್ಯ ಕೊಡುತ್ತಿರಲಿಲ್ಲ. ಅವರನ್ನು ಕಂಡು ಮಹದೇವರಿಗೆ 'ಅಯ್ಯೋ' ಎನ್ನಿಸುತ್ತಿತ್ತು. ಅನೇಕ ಸಾರಿ ಅವರನ್ನು ತಿದ್ದಲು ಪ್ರಯತ್ನಿಸಿ ವಿಫಲರಾಗಿ ನಿರಾಶೆಯಿಂದ ಸಂಕಟಪಟ್ಟರು. ಇಂಥ ಒಂದು ಪ್ರಸಂಗದಲ್ಲಿ ಸಿಲುಕಿ ಎರಡನೇ ವರ್ಷದ ಎಲ್.ಎಲ್.ಬಿ ಪರೀಕ್ಷೆಗೆ ಹೋಗಲಾಗದೆ ಒಂದು ವರ್ಷದ ವ್ಯಾಸಂಗವೂ ನಷ್ಟವಾಯಿತು.

ಮಹದೇವರಲ್ಲಿ ಸಾಹಿತ್ಯದ ಒಲವೂ ಅಪಾರವಾಗಿತ್ತು. ಇದಕ್ಕೆ ಮುಂಬಯಿನ ಪ್ರಾಚ್ಯ ಸಂಶೋಧನಾ ಭಾಷಾಂತರ ಕಾರ್ಯಾಲಯದ ಸೇವೆ ಪೂರಕವಾಯಿತು. ಗುಜರಾತಿ, ಹಿಂದಿ, ಇಂಗ್ಲಿಷ್, ಪುಸ್ತಕಗಳನೇಕವನ್ನು ಅಲ್ಲಿ ವಿಮರ್ಶೆ ಮಾಡಬೇಕಾಗಿತ್ತು. ಮಾಂಡಲೆ ಸೆರೆಮನೆಯಲ್ಲಿದ್ದ ಲೋಕಮಾನ್ಯರು ಬರೆದ 'ಗೀತಾ ರಹಸ್ಯ'ದ ಕರಡು ಪ್ರತಿಯನ್ನು ಅಧಿಕೃತ ವಿಮರ್ಶೆಗಾಗಿ ಪ್ರಾಚ್ಯ ಸಂಶೋಧನಾ ಭಾಷಾಂತರ ಕಾರ್ಯಾಲಯಕ್ಕೆ ಕಳುಹಿಸಿಕೊಟ್ಟರು. ಮಹದೇವರು ಅದನ್ನೋದಿ ಪ್ರಭಾವಿತರಾಗಿ ಗೀತೆಯ ಬಗ್ಗೆ ಆಳವಾದ ಅಧ್ಯಯನಕ್ಕೆ ಮುಂದಾದರು.

ತಂದೆ ಹರಿಭಾಯಿ ದೇಸಾಯಿ ಅಹಮದಾಬಾದಿಗೆ ಮಹಿಳಾ ಶಿಕ್ಷಣ ಸಂಸ್ಥೆಯ ಮುಖ್ಯಸ್ಥರಾಗಿ 1914ರಲ್ಲಿ ವರ್ಗವಾಗಿ ಬಂದರು. ಆಗ ಮಹದೇವರ ಎಲ್.ಎಲ್.ಬಿ. ಪರೀಕ್ಷೆಗಳೂ ಮುಗಿದಿತ್ತು. ಅಹಮದಾಬಾದಿನ ನ್ಯಾಯಾಲಯದಲ್ಲಿ ವಕೀಲ ವೃತ್ತಿ ಪ್ರಾರಂಭಿಸಲು ನಿಶ್ಚಯಿಸಿದರು. ಅದೂ ಸಾಧ್ಯವಾಗಲಿಲ್ಲ. ತಂದೆಗೂ ನಿವೃತ್ತಿಯ ವಯಸ್ಸು ಸಮೀಪಿಸುತ್ತಿತ್ತು. ಮಹದೇವ ಜೀವನಕ್ಕಾಗಿ ನೌಕರಿ ಸೇರಲು ಹವಣಿಸಿದರು. ಆಗ ಮುಂಬಯಿಯ ಕೇಂದ್ರ ಸಹಕಾರೀ ಬ್ಯಾಂಕಿನ ಮುಖ್ಯಸ್ಥರಾಗಿದ್ದ ವೈಕುಂಠಭಾಯಿ ಮೆಹತಾ ಮಹದೇವರ ನೆರವಿಗೆ ಬಂದು ಗುಜರಾತ್ ಮತ್ತು ಮಹಾರಾಷ್ಟ್ರಗಳಲ್ಲಿನ ಸಹಕಾರಿ ಲೇವಾದೇವಿ ಸಂಘಗಳ ಮೇಲ್ವಿಚಾರಕರಾಗಿ ನೇಮಿಸಿದರು. ಇವರಲ್ಲಿದ್ದ ಪ್ರಾಮಾಣಿಕತೆ, ದಕ್ಷತೆ, ಹಾಗೂ ಸೇವಾಮನೋಭಾವಗಳಿಂದಾಗಿ ಬಹು ಬೇಗ ಎಲ್ಲರಿಗೂ ಪ್ರಿಯರಾದರು. ಈ ವೃತ್ತಿಯಿಂದಾಗಿ ಗ್ರಾಮಾಂತರ ಪ್ರದೇಶಗಳಲ್ಲಿನ ಆರ್ಥಿಕ, ಸಾಮಾಜಿಕ ಪರಿಸ್ಥಿತಿಯೂ ಮಹದೇವರ ಕಣ್ಣಿನಲ್ಲಿ ಕಟ್ಟಿ ನಿಂತಿತು. ಮಹಾರಾಷ್ಟ್ರ ಪ್ರದೇಶದಲ್ಲಿ ಪ್ರವಾಸ ಮಾಡುತ್ತಾ ಮರಾಠಿ ಕಲಿತರು. ಅಲ್ಲಿನ ವಿಪುಲ ಸಾಹಿತ್ಯ ಅವರ ಮನಸ್ಸನ್ನು ಸೂರೆಗೊಂಡಿತು.

ಆ ಸಮಯದಲ್ಲಿ ಸಹಜ ಸಾತ್ವಿಕ ಮಹದೇವರ ಅಂತಃಶಕ್ತಿಯ ಪರೀಕ್ಷೆಗೆ ಕೆಲವು ಸಂದರ್ಭಗಳು ಘಟಿಸಿದವು ಎರಡು ಸಂದರ್ಭದಲ್ಲಿ ಇಬ್ಬರು ಭಾರತೀಯ ಹೆಣ್ಣುಮಕ್ಕಳು, ಇನ್ನೆರಡು ಸಂದರ್ಭದಲ್ಲಿ ಇಬ್ಬರು ಐರೋಪ್ಯ ಹೆಣ್ಣುಮಕ್ಕಳು ಮಹದೇವರನ್ನು ಸೆಳೆಯಲು ಪ್ರಯತ್ನಿಸಿದರು. ದೇವರ ಅನುಗ್ರಹ, ಮಹದೇವರು ಅವರ ಬಲೆಗೆ ಬೀಳಲಿಲ್ಲ. ಪತ್ನಿ ದುರ್ಗಾದೇವಿಯಲ್ಲಿ ಮಹದೇವದೇಸಾಯಿ ಬೆಳೆಸಿಕೊಂಡಿದ್ದ ಸಾತ್ವಿಕ ಪ್ರೇಮ ಅವರ ಪಾಲಿಗೆ 'ರಾಮರಕ್ಷೆ'ಯಾಯಿತು[1].

ಕ್ರಮೇಣ ಸಹಕಾರಿ ಲೇವಾದೇವಿ ಸಂಘಗಳ ಮೇಲ್ವಿಚಾರಣೆಯಲ್ಲಿ ಮಹದೇವರಲ್ಲಿದ್ದ ನಿಯಮಬದ್ಧ ದಕ್ಷತೆ ಪ್ರಸಿದ್ಧವಾಯಿತು. ವ್ಯಾವಹಾರಿಕ ಸಮಸ್ಯೆಗಳನ್ನು ಅವರು ಬರೀ ನಿಯಮಗಳ ಪ್ರಕಾರ ತೀರ್ಮಾನಿಸುತ್ತಿರಲಿಲ್ಲ. ಯಾವುದು ನ್ಯಾಯ, ಯಾವುದು ಅನ್ಯಾಯ ಎಂದು ಪರಿಶೀಲಿಸಿ ತೀರ್ಮಾನಿಸುತ್ತಿದ್ದರು. ಸಂಘಗಳ ಪದಾಧಿಕಾರಿಗಳು ಶೀಲವಂತರೂ

ದಕ್ಷರೂ ಆಗಿರಬೇಕೆಂದು ಅವರ ತಪ್ಪುಗಳನ್ನು ಮಹದೇವರು ತೋರಿಸುತ್ತಿದ್ದರು. 'ಮೃದುವಾಗಿ ವರ್ತಿಸಿ' ಎಂದು ಮೇಲಧಿಕಾರಿಗಳು ಈ ವಿಷಯದಲ್ಲಿ ಇವರಿಗೆ ಹೇಳುತ್ತಿದ್ದರು. ಅದಕ್ಕಾಗಿ ಒಂದೆರಡು ಬಾರಿ ಪ್ರತಿಭಟಿಸಿದ ಮಹದೇವ ಕೊನೆಗೆ ರಾಜೀನಾಮೆ ಕೊಟ್ಟು ಹೊರಬಂದರು. ಇದರಿಂದ ವೈಕುಂಠಭಾಯಿ ಮೆಹತಾಗೆ ವ್ಯಥೆಯಾಯಿತು. ಮಹದೇವರನ್ನು ಬಿಟ್ಟುಕೊಡಲಾರದೆ, 'ಹೈದರಾಬಾದಿನ ಶಾಖೆಗೆ ಮುಖ್ಯಸ್ಥರಾಗಿ ಹೋಗಿ' ಎಂದರು. ಆದರೆ ಅಲ್ಲಿಗೆ ಹೋಗಲು ಮಹದೇವ ಒಪ್ಪಲಿಲ್ಲ.

ಆ ಸಮಯದಲ್ಲಿ ಅಂದರೆ 1914ರಲ್ಲಿ ಮೊದಲನೇ ಮಹಾಯುದ್ಧದ ಕರಾಳ ಛಾಯೆ ಜಗತ್ತನ್ನಾವರಿಸಿತ್ತು. ಭಾರತದಲ್ಲಿ ರಾಷ್ಟ್ರನಾಯಕರು ರಾಷ್ಟ್ರದ ಸ್ವಾಭಿಮಾನವನ್ನು ಜಾಗೃತಗೊಳಿಸಿ ಸ್ವಾತಂತ್ರ್ಯಾಕಾಂಕ್ಷೆಯ ಧ್ವನಿಗೆ ಶಕ್ತಿ ತುಂಬುತ್ತಿದ್ದರು.

ಬ್ರಿಟಿಷ್ ಸರ್ಕಾರದ ಭಾರತ ಕಾರ್ಯದರ್ಶಿ ಮಾಂಟೆಗ್ಯೂ ಅವರು 'ಯುದ್ಧ ಮುಗಿದೊಡನೆ ಭಾರತಕ್ಕೆ ಸ್ವಯಂ ಆಡಳಿತ ಹಕ್ಕನ್ನು ಕೊಡುತ್ತೇವೆ. ಯುದ್ಧ ಸಿದ್ಧತೆಗೆ ಪೂರ್ಣ ಬೆಂಬಲ ಕೊಡಿ' ಎಂದು ಘೋಷಿಸಿ ಭಾಷಣ ಮಾಡಿದರು. ಆ ಪ್ರಸಿದ್ಧ ಭಾಷಣ ರಾಷ್ಟ್ರ ನಾಯಕರ ಮೇಲೆ ಮಹತ್ವದ ಪ್ರಭಾವ ಬೀರಿತು. ಮುಂಬಯಿಯ 'ಹೋಂ ರೂಲ್ ಸಂಘ' ಆ ಭಾಷಣವನ್ನು ಮಹದೇವರಿಂದ ಭಾಷಾಂತರಿಸಿ ಪ್ರಸಿದ್ಧಪಡಿಸಿತು. ನಂತರ ಮುಂಬಯಿಗೆ ಬಂದ ಮಹದೇವರನ್ನು ಅನೇಕ ನಾಯಕರು ತಮ್ಮೊಡನೆ ಕಾರ್ಯ ನಿರ್ವಹಿಸಲು ಆಹ್ವಾನಿಸಿದರು. ಆ ಎಲ್ಲಾ ವಿಶ್ವಾಸ ಗೆಳೆತನಗಳ ಮಧ್ಯೆ ಸಾರ್ವಜನಿಕ ಸೇವಾರಂಗವನ್ನು ಮಹದೇವರು ಪ್ರವೇಶಿಸಿದರು. ಏತನ್ಮಧ್ಯೆ ಸ್ವಲ್ಪ ಕಾಲ ಮಹದೇವರು ಜಮನದಾಸ ದ್ವಾರಕಾದಾಸರ ಬಳಿ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸಿದರು.

# ಗಾಂಧಿ ಅವರ ಸಾನ್ನಿಧ್ಯ

ದಕ್ಷಿಣ ಆಫ್ರಿಕಾದಿಂದ 1915ರ ಜನವರಿ ಒಂಬತ್ತರಂದು ಭಾರತಕ್ಕೆ ಆಗಮಿಸಿದ್ದ ಗಾಂಧೀಜಿ ಕೆಲ ದಿವಸಗಳ ನಂತರ ಸತ್ಯಾಗ್ರಹ ಆಶ್ರಮವನ್ನು ಪ್ರಾರಂಭಿಸಿ ಭಾರತದ ಇತಿಹಾಸದಲ್ಲಿ ಹೊಸ ಅಧ್ಯಾಯವನ್ನು ಪ್ರಾರಂಭಿಸುವ ಸನ್ನಾಹದಲ್ಲಿದ್ದರು. ಮಹದೇವರಿಗೆ ತಮ್ಮ ಬಾಳಿನಪಥ ಸತ್ಯಾಗ್ರಹ ಆಶ್ರಮದಲ್ಲಿನ ಧೋರಣೆ ಬಿಟ್ಟರೆ ಬೇರಾವ ದಿಕ್ಕಿನಲ್ಲೂ ತೃಪ್ತಿತರಲಾರದೆಂಬ ಭಾವನೆ ತುಂಬಿ ಬರುತ್ತಿತ್ತು. ಆ ಸಮಯಕ್ಕೆ ಸರಿಯಾಗಿ ಗಾಂಧೀಜಿ, ಆಶ್ರಮದ ವಿಧಿನಿಷೇಧಗಳ ಕರಡೊಂದನ್ನು ಸಿದ್ಧಗೊಳಿಸಿ, ಪ್ರಕಟಿಸಿ, ವಾಚಕರಿಂದ ಅಭಿಪ್ರಾಯಗಳನ್ನು ಅಪೇಕ್ಷಿಸಿದ್ದರು. ಅದಾಗಲೇ 25 ವರ್ಷ ಪ್ರಾಯದ ವಕೀಲ ಮಹದೇವ ಅವರು, ಮಿತ್ರನಾದ ನರಹರಿ ಪರೇಖ್ ಜೊತೆ ಸೇರಿ ರವೀಂದ್ರರ ಕೆಲವು ಕವಿತೆಗಳನ್ನು ಗುಜರಾತಿಗೆ ಅನುವಾದ ಮಾಡಿದ್ದರು. ಅವರಿಬ್ಬರು ಗಾಂಧೀಜಿ ಅವರ ಆಶ್ರಮದ ನಿಧಿ ನಿಷೇಧದ ಕರಡಿನ ಮೇಲೊಂದು ಟೀಕೆ ಸಿದ್ಧಪಡಿಸಿ ಕಳುಹಿಸಿದರು. ಇಬ್ಬರನ್ನೂ ಗಾಂಧೀಜಿ ಕರೆಸಿ ನೀವೇನು ಮಾಡುತ್ತಿದ್ದೀರಿ?' ಎಂದು ಕೇಳಿದರು. 'ಎಲ್. ಎಲ್. ಬಿ. ಮಾಡಿ ವಕೀಲರಾಗಿದ್ದೇವೆ' ಎಂದರು. ಆಗ ಗಾಂಧೀಜಿ 'ಅತ್ಯಾಧುನಿಕ ಭಾರತದ ಕೈಪಿಡಿ ನಿಮ್ಮಲ್ಲಿದೆಯೇ? ನಾನು ಅದರಿಂದ ಕೆಲವು ಅಂಶಗಳನ್ನು ಪಡೆಯಬೇಕಾಗಿದೆ. 'ಎಂದರು. ಆಗ ಆ ತರುಣರು 'ಹೋದವರ್ಷದ್ದಿದೆ' ಎಂದು ಅಳುಕಿನ ಉತ್ತರವಿತ್ತರು. 'ಹೀಗೇನು ನೀವು ವಕೀಲಿವೃತ್ತಿ ಮಾಡುವುದು? ಎಲ್ಲರಿಗಿಂತ ಮುಂಚೆ ನಿಖರವಾದ ಅಂಕಿ ಅಂಶಗಳು ನಿಮ್ಮಲ್ಲಿರಬೇಡವೇ?' ಎಂದು ಸ್ವಲ್ಪ ಗಡುಸಾಗಿಯೇ ಗಾಂಧೀಜಿ ನುಡಿದರು. ನಂತರ ಆಶ್ರಮದ ಧ್ಯೇಯ ಧೋರಣೆ ಹಾಗೂ ಆದರ್ಶಗಳನ್ನು ವಿವರಿಸಿ ಹೇಳಿದರು. ಯುವಕರ ಮನಸ್ಸು ತುಂಬಿತ್ತು.

ಅಷ್ಟೊತ್ತಿಗೆ ರಾತ್ರಿ ಹತ್ತು ಗಂಟೆಯಾಗಿತ್ತು ಇಬ್ಬರೂ ಹಿಂತಿರುಗುತ್ತಾ 'ಈ ಮನುಷ್ಯನ ಪಾದಸೇವೆ ಮಾಡುತ್ತ ಕೂಡೋಣ ಅನ್ನಿಸುತ್ತದೆ' ಎಂದರು ನರಹರಿ ಪರೇಖ್. ಅದಕ್ಕೆ ಮಹದೇವರು ಹಾಗೆ ಮಾಡುವುದಾದರೆ ನಾವೇ ಧನ್ಯರು' ಎಂದರು. ಗಾಂಧೀ ಜೀವನ ಮಾರ್ಗ ಇವರನ್ನು ಅವರೆಡೆಗೆ ಸೆಳೆದು ಧನ್ಯತೆಯನ್ನು ತಂದುಕೊಟ್ಟಿತು.

ಆ ಸಮಯದಲ್ಲಿ ಗುಜರಾತಿನ ಫೋರ್ಬ್ಸ್ ಸಂಘದವರು ಲಾರ್ಡ್ ಮಾರ್ಲೆಯವರ ಒಪ್ಪಂದಗಳನ್ನು ಕುರಿತು 'ಆನ್ ಕಾಂಪ್ರೊಮೈಜ್' ಕೃತಿಯನ್ನು ಗುಜರಾತಿ ಭಾಷೆಗೆ ಭಾಷಾಂತರಿಸಲು ಸ್ಪರ್ಧೆ ನಡೆಸಿದರು. ಮಹದೇವದೇಸಾಯಿ ಭಾಷಾಂತರವನ್ನು ಅಂಗೀಕರಿಸಿ ಒಂದು ಸಾವಿರ ರೂಪಾಯಿಗಳ ಬಹುಮಾನ ಗಳಿಸಿದರು. ಆ ಪುಸ್ತಕವನ್ನು ಹೇಗೆ ಪ್ರಕಟಿಸುವುದು ಎಂಬುದರ ಕುರಿತು ಗಾಂಧಿಯವರಿಂದ ಸಲಹೆಯನ್ನು ಪಡೆದರು. ಮುಂದೆ ನವಜೀವನ ಟ್ರಸ್ಟಿನವರು ಈ ಕೃತಿಯನ್ನು 'ಸತ್ಯಗ್ರಹಾನಿ ಮರ್ಯಾದ' ಎಂದು ಗುಜರಾತಿ ಹೆಸರಿನಲ್ಲಿ ಪ್ರಕಟಿಸಿದರು.

## ಎರಡನೆಯ ಸಲ

1916ರ ಜೂನ್ 20ರಂದು ಅಹಮದಾಬಾದಿನ ಪ್ರೇಮಭಾಯಿ ಸಭಾಂಗಣದಲ್ಲಿ ಗಾಂಧೀಜಿ ಸಾರ್ವಜನಿಕ ಸಭೆಯಲ್ಲಿ ಮಾತನಾಡುತ್ತಿದ್ದರು. ಅದನ್ನು ತನ್ಮಯತೆಯಿಂದ ಕೇಳುತ್ತಿದ್ದ ಮಹದೇವ ಮತ್ತು ನರಹರಿ ಪರೇಖ್ ಸಭೆ ಮುಗಿದೊಡನೆ ಗಾಂಧೀ ಅವರ ಬಳಿ ಹೋಗಿ 'ನಿಮ್ಮೊಡನೆ ಮಾತನಾಡಬೇಕು' ಎಂದರು. ಅದಾಗಲೇ ಅವರಿಬ್ಬರ ಪರಿಚಯವಿದ್ದುದರಿಂದ 'ನನ್ನೊಡನೆ ಆಶ್ರಮಕ್ಕೆ ನಡೆಯಿರಿ' ಎಂದರು. ಗಾಂಧಿಯ ವೇಗ ನಡಿಗೆಯೊಡನೆ ಕಾಲು ಹಾಕುವುದೇ ಅವರಿಬ್ಬರಿಗೆ ಕಷ್ಟವಾಯಿತು. ಆದರೂ ತಮ್ಮಂತಹ ಕಿರಿಯರಲ್ಲಿ ಗಾಂಧೀಜಿ ತೋರಿದ ಸಹಜ ವಾತ್ಸಲ್ಯದಿಂದಾಗಿ ಅವರ ಮನಸ್ಸು ಸಂತಸಗೊಂಡಿತ್ತು. ನಂತರ ಸೇವಾತತ್ಪರರಾಗಿದ್ದ ಅವರಿಬ್ಬರೂ ಆಶ್ರಮದ ಸದಸ್ಯರಾದರು.

## ಚಂಪಾರಣ್ಯ ಸತ್ಯಾಗ್ರಹ

ಆಗ್ಗೆ ಬಿಹಾರದ ತಿರುಹುತ್ ಜಿಲ್ಲೆಯ ಚಂಪಾರಣ್ಯದ ತೋಟಗಳ ಕೂಲಿಗಾರರಿಗೆ ತುಂಬ ಅನ್ಯಾಯವಾಗುತ್ತಿತ್ತು. ಅವರ ಪರವಾಗಿ ಗಾಂಧೀಜಿ ಅಲ್ಲಿಗೆ ಹೋಗಿ 1917ರ ಏಪ್ರಿಲ್‌ನಲ್ಲಿ ಪ್ರಥಮವಾಗಿ ಸತ್ಯಾಗ್ರಹ ಹೂಡಿದರು. ಚಂಪಾರಣ್ಯದ ಮುಖ್ಯ ಪಟ್ಟಣವಾದ ಮೋತಿಹಾರ್‌ನಲ್ಲಿ

ನಡೆದ ಸತ್ಯಾಗ್ರಹ ಶಿಬಿರದಲ್ಲಿ ರಾಜೇಂದ್ರ ಪ್ರಸಾದ್ ಮತ್ತು ಬ್ರಜ್‌ಕಿಶೋರ ಬಾಬು ಗಾಂಧೀಜಿಯೊಡನೆ ಕಾರ್ಯ ನಿರ್ವಹಿಸುತ್ತಿದ್ದರು. ಆ ಶಿಬಿರ ಕಾರ್ಯಕರ್ತರಿಂದ ತುಂಬಿತ್ತು. ಅಲ್ಲಿನ ತೋಟಗಳ ಮಾಲೀಕರು ಬಿಳಿಯರು. ಬ್ರಿಟಿಷ್ ಅಧಿಕಾರಿಶಾಹಿ ಅವರಿಗೆ ರಕ್ಷಣೆ ಕೊಡುತ್ತಿತ್ತು. ಆದರೆ ಕೂಲಿಕಾರರಿಗೆ ನ್ಯಾಯ ದೊರಕಿಸಿಕೊಡಲು ಗಾಂಧಿ ಅವರ ತಂಡ ಹೋರಾಡುತ್ತಿತ್ತು. ನ್ಯಾಯಾಲಯಗಳಲ್ಲಿ ಮೊಕದ್ದಮೆಗಳನ್ನು ಹೂಡಲಾಯಿತು. ಜಿಲ್ಲಾಧಿಕಾರಿಗಳಿಗೆ ಮನವಿಗಳನ್ನು ಸಲ್ಲಿಸಿದರು. ಗಾಂಧೀಜಿ ಅಲ್ಲಿನ ಹಳ್ಳಿಹಳ್ಳಿಗಳಲ್ಲಿ ತಿರುಗಿ ಖಚಿತ ಅಂಕಿ ಅಂಶಗಳನ್ನು ಪಡೆದು ವಾದಿಸುತ್ತಿದ್ದರು. ಬಿಹಾರದ ಗ್ರಾಮಗಳಲ್ಲಿ ದಾರಿದ್ರ್ಯ, ಅಜ್ಞಾನ, ಅನಾರೋಗ್ಯ, ಅಸ್ವಚ್ಛತೆ ತುಂಬಿ ಕೊಳಚೆಯ ಕೂಪಗಳಾಗಿದ್ದವು. ಈ ಸ್ಥಿತಿಯನ್ನು ಸುಧಾರಿಸದೆ ಯಾವ ಜನಜಾಗೃತಿಯೂ ಸಾಧ್ಯವಾಗದು ಎಂದು ಗಾಂಧೀಜಿ ಕೂಡಲೇ ಗ್ರಾಮ ಸೇವಾ ಕಾರ್ಯದಲ್ಲಿ ತೊಡಗಿದರು. ಆರು ಗ್ರಾಮಗಳಲ್ಲಿ ಪ್ರಾಥಮಿಕ ಶಾಲೆ ಪ್ರಾರಂಭಿಸಿದರು. ಶಿಕ್ಷಕವರ್ಗ ಸಂಬಳ ಬಯಸದೆ ಸೇವೆ ಸಲ್ಲಿಸಬೇಕಾಗಿತ್ತು. ಗಾಂಧೀಜಿಯ ಕರೆಗೆ ಓಗೊಟ್ಟು ಮೋತಿಹಾರಿ ತಲುಪಿದ ಮೊದಲ ತಂಡದಲ್ಲಿ ಮಹದೇವರು, ಪತ್ನಿ ದುರ್ಗಾಬೆಹೆನ್, ಸ್ನೇಹಿತರಾದ ನರಹರಿ ಪರೇಖ್, ಮೋಹನಲಾಲ್ ಪಾಂಡ್ಯ ಮತ್ತು ರವಿಶಂಕರ ವ್ಯಾಸ್ ಮುಂತಾದವರಿದ್ದರು. ಮಹದೇವರ ಈ ಕಾರ್ಯವೈಖರಿಯಿಂದ ತಂದೆಯಾದ ಹರಿಭಾಯಿ ದೇಸಾಯಿಗೆ ಅಸಮಾಧಾನವಾಯಿತು. ಮಹದೇವರು ತಂದೆಗೆ ಸಮಾಧಾನದ ಪತ್ರ ಬರೆಯುತ್ತಾ "ಯಾವ ಲೌಕಿಕ ಮಹದಾಸೆಯಿಂದಲೂ ನಾನು ಗಾಂಧಿಯೊಡನೆ ಸೇರುತ್ತಿಲ್ಲ. ಅವರ ನೆರಳಿನಂತೆ ಬದುಕುವುದೇ ನನ್ನ ಆಸೆ. ಅವರ ಸಹವಾಸವೇ ಒಂದು ಶಿಕ್ಷಣ. ನನಗೆ ನಾಯಕತ್ವದ ಹಂಬಲವಿಲ್ಲ. ಪ್ರತಿಷ್ಠೆ ಸ್ಥಾನಮಾನಗಳು ಪ್ರತ್ಯೇಕವಾಗಿ ನನಗೇಕೆ? ಗಾಂಧೀಜಿಯ ಬಾಳಿನೊಡನೆ ಬೆಸೆದುಕೊಂಡ ನನಗೆ ಅವೆಲ್ಲವೂ ಲಭ್ಯವಾಗಿಯೇ ಹೋಗಿದೆ" ಎಂದು ತಿಳಿಸಿದರು. ದೇಶದ ನಾನಾ ಭಾಗಗಳಿಂದ ನೂರಾರು ಜನ ಆಗಮಿಸಿ ಕಾರ್ಯನಿರ್ವಹಿಸಲು ಆಗಮಿಸಿದರು. ಎಲ್ಲರೂ ಉತ್ಸಾಹಭರಿತರಾಗಿದ್ದರೂ ಶಿಕ್ಷಕ ವೃತ್ತಿಯ ಯಾವ ಅನುಭವವೂ ಇರಲಿಲ್ಲ. ಹಿಂದಿಯಲ್ಲಿ ಪಾಠ ಹೇಳುವ ತರಬೇತಿಯನ್ನು

ಗಾಂಧೀಜಿಯೇ ಕೊಟ್ಟರು. ಮಹದೇವದೇಸಾಯಿ ಅತ್ಯಂತ ಶ್ರದ್ಧೆಯಿಂದ ತರಗತಿಗಳ ವ್ಯವಸ್ಥೆ ಮಾಡಿದರು. ಆರೋಗ್ಯ ಶಿಕ್ಷಣ ಏರ್ಪಡಿಸಿದರು. ರಚನಾತ್ಮಕ ಕಾರ್ಯಕ್ರಮಗಳ ಬುನಾದಿಯನ್ನೇ ನಿರ್ಮಿಸಿದರು. ಹೀಗೆ ಸುಮಾರು ಒಂದು ವರ್ಷ ನಡೆದ ಈ ಸೇವಾದೀಕ್ಷೆ ಮಹದೇವದೇಸಾಯಿ ಮತ್ತು ದುರ್ಗಾಬೆಹೆನರ ಜೀವನದಲ್ಲಿ ಶಾಶ್ವತವಾಯಿತು. ಆನಂತರ ಸತ್ಯಾಗ್ರಹ ಆಶ್ರಮದ ಕಡೆಗೆ ಹೊರಟ ಮಹದೇವದೇಸಾಯಿ 'ನಾನು ನಿಮ್ಮ ಕಾರ್ಯದರ್ಶಿಯಾಗಿ ಕೆಲಸ ಮಾಡಬಲ್ಲೆ' ಎಂದು ಗಾಂಧೀಜಿಗೆ ಹೇಳಿದರು. ಇದಕ್ಕೆ ಪ್ರತ್ಯುತ್ತರವೆಂಬಂತೆ 1917ರ ಆಗಸ್ಟ್ 31ರಂದು ಗಾಂಧೀಜಿ ಮಹದೇವದೇಸಾಯಿಗೆ 'ನಾನು ನನಗೆ ಬೇಕಾಗಿದ್ದ ವ್ಯಕ್ತಿಯನ್ನು ನಿನ್ನಲ್ಲಿ ಕಂಡುಕೊಂಡಿದ್ದೇನೆ' ಎಂದು ಹೇಳಿದ್ದರು.

1917ರ ಸೆಪ್ಟೆಂಬರ್‌ನಲ್ಲಿ ಗಾಂಧೀಜಿ ಮುಂಬಯಿಯಲ್ಲಿ ಬಿಡಾರ ಹೂಡಿದ್ದರು. ಮಹದೇವದೇಸಾಯಿಗೆ ತಮ್ಮ ನಾಯಕನಿಂದ ದೂರವಿರಲು ಸಾಧ್ಯವಾಗಲಿಲ್ಲ. ಮುಂಬಯಿಗೆ ಬಂದು ನೇರವಾಗಿ ಗಾಂಧೀಜಿಯ ಬಳಿ ಹೋದರು. "ನಿನಗಾಗಿಯೇ ನಾನು ಕಾದಿದ್ದೇನೆ ಮಹದೇವ. ಎಲ್ಲ ಕೆಲಸಗಳನ್ನು ಬಿಟ್ಟು ನಿನ್ನ ಹೆಂಡತಿಯೊಡನೆ ಇಲ್ಲಿಗೆ ಬಂದುಬಿಡು. ನಿನ್ನ ಕ್ರಮಬದ್ಧತೆ, ಸ್ವಾಮಿನಿಷ್ಠೆ ಮತ್ತು ಬುದ್ಧಿಶಕ್ತಿಗಳು ನನ್ನನ್ನು ಸೂರೆಗೊಂಡಿವೆ. ನಿನ್ನ ನೆರವಿನಿಂದ ನನ್ನ ಕೆಲಸಗಳೆಲ್ಲ ಸುಗಮವಾದಾವು" ಎಂದು ಗಾಂಧೀಜಿ ನುಡಿದಾಗ ಮಹದೇವರ ಕಣ್ಣುಗಳು ತೇವಗೊಂಡವು. ಹೃದಯ ಉಕ್ಕಿ ಬಂತು. "ಇನ್ನು ಆರು ತಿಂಗಳು ನೀನು ಸಮಯ ತೆಗೆದುಕೋ. ಚನ್ನಾಗಿ ವಿಚಾರಮಾಡು. ಹೆಂಡತಿಯೊಡನೆ ಸಮಾಲೋಚಿಸು. ಅಲ್ಲಿಯವರೆಗೂ ಕಾಯುತ್ತೇನೆ" ಎಂದರು ಗಾಂಧೀಜಿ. ಮಹದೇವದೇಸಾಯಿಗೆ ಹೆಚ್ಚು ದಿನ ತಡೆಯಲಾಗಲಿಲ್ಲ. ಅದೇ ವರ್ಷ ನವೆಂಬರಿನಲ್ಲಿ ಮಹದೇವದೇಸಾಯಿ ದಂಪತಿಗಳು ಗಾಂಧೀ ಪರಿವಾರದಲ್ಲಿ ಸೇರಿ ಸುಂದರ ಸರಳ ಜೀವನ ನಡೆಸಲು ಪ್ರಾರಂಭಿಸಿದರು.

1917ರ ನವೆಂಬರ್ ಎರಡರಿಂದ ಐದರವರೆಗೆ (ನಾಲ್ಕು ದಿವಸ) ಪಂಚಮಹಲ್ ಜಿಲ್ಲೆಯ ಗೋಧ್ರಾ ನಗರದಲ್ಲಿ ಗುಜರಾತ್‌ನ ಪ್ರಾಂತೀಯ

ರಾಜಕೀಯ ಪರಪತ್ತಿನ ಮೊದಲ ಅಧಿವೇಶನ ನಡೆಯುತ್ತಿತ್ತು. ಆ ಅಧಿವೇಶನದ ಅಧ್ಯಕ್ಷರು ಗಾಂಧೀಜಿ. ವಿಶೇಷ ಅತಿಥಿಗಳಾಗಿ ವಿಟ್ಠಲಭಾಯೀ ಪಟೇಲ್, ವಲ್ಲಭಭಾಯಿ ಪಟೇಲ್, ಆದಿವಾಸಿಗಳ ಪರಮ ಮಿತ್ರ ಠಕ್ಕರ್ ಬಾಪಾ, ಲೋಕಮಾನ್ಯ ತಿಲಕ್ ಮುಂತಾದ ಗಣ್ಯರು ನೇಮಕವಾಗಿದ್ದರು. ಅಲ್ಲಿ ಮಹದೇವದೇಸಾಯಿ ಗಾಂಧಿ ಅವರ ದರ್ಶನ ಪಡೆದರು. ಮತ್ತು ಅವರ ಭಾಷಣ ಕೇಳಿದರು. ಗಾಂಧೀಜಿಗೆ ಮಹದೇವದೇಸಾಯಿ ತನ್ನ ಹಿಂದಿನ ಉದ್ಯೋಗದಾತನಿಗಾಗಿ ಇಂಗ್ಲೀಷ್‌ನಲ್ಲಿ ಬರೆದ ಭಾಷಣದ ಪ್ರತಿಯನ್ನು ತೋರಿಸಿದರು. ಆತನ ಅಕ್ಷರಗಳು ಮುತ್ತಿನಂತಿದ್ದವು. ಅಂದಿನಿಂದಲೇ ಅಂದರೆ 1917ರ ನವಂಬರ್ 13ರಿಂದ ಗಾಂಧಿ ಅವರ ಆಪ್ತ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸಿ ದಿನಚರಿಯನ್ನು ಬರೆಯಲು ಪ್ರಾರಂಭಿಸಿದರು. 1918ರಲ್ಲಿ ಅಹಮದಾಬಾದ್ ನಗರದಲ್ಲಿ ನಡೆದ ಜವಳಿ ಮಿಲ್ಲುಗಳ ಕಾರ್ಮಿಕರ ಚಳವಳಿಯಲ್ಲಿ ಗಾಂಧೀಜಿ ಜೊತೆ ಪಾಲ್ಗೊಂಡರು.

## ಖೇಡಾ ಸತ್ಯಾಗ್ರಹ

ಗುಜರಾತಿನ ಖೇಡಾ ಜಿಲ್ಲೆಯಲ್ಲಿ 1918ರಲ್ಲಿ ಬರಗಾಲ ಬಂದು ರೈತರು ದುಃಖಿತರಾದರು. ಕಂದಾಯ ರದ್ದು ಮಾಡದಿರಲು ಸರಕಾರ ನಿರ್ಧರಿಸಿದ್ದರಿಂದ ಗಾಂಧೀಜಿಯ ನೇತೃತ್ವದಲ್ಲಿ ರೈತರು ಸತ್ಯಾಗ್ರಹ ಹೂಡಬೇಕಾಯಿತು. ಹಂತ ಹಂತವಾಗಿ ಜನತಾಶಕ್ತಿ ಬೆಳೆಯುತ್ತಿದ್ದ ಆ ಕಾಲಕ್ಕೆ ಖೇಡಾ ಜಿಲ್ಲೆ ಗಾಂಧೀಜಿಯ ಸತ್ಯಾಗ್ರಹಕ್ಕೆ ಮಹಾ ಪ್ರಯೋಗ ಕ್ಷೇತ್ರವಾಯಿತು. ವಲ್ಲಭಭಾಯಿ ಪಟೇಲರು ರಾಷ್ಟ್ರೀಯ ರಂಗಕ್ಕೆ ಕಾಲಿಟ್ಟಿದ್ದು ಆಗಲೇ. ವಕೀಲಿ ವೃತ್ತಿಯಲ್ಲಿ ಸಂಪತ್ಸಮೃದ್ಧ ಸುಖಜೀವನವನ್ನು ನಡೆಸಬಹುದಾಗಿದ್ದ ಪಟೇಲರು ಆ ವೃತ್ತಿಯನ್ನು ತ್ಯಜಿಸಿ ಗಾಂಧಿ ಅನುಯಾಯಿ ಆದುದು ಒಂದು ಚಾರಿತ್ರಿಕ ಮಹತ್ವದ ಘಟ್ಟ. ಆ ಉಕ್ಕಿನ ನಾಯಕನೊಡನೆ ಸರಿಸಮನಾಗಿ ಕೋಮಲ ಸ್ವಭಾವದ ಮಹದೇವದೇಸಾಯಿ ಅಷ್ಟೇ ದೃಢವಾಗಿ ಗಾಂಧೀಜಿಗೆ ನೆರವಾಗಿ ನಿಂತರು. ಮಹದೇವ ಅವರೇ ಸಿದ್ಧಪಡಿಸಿದ ಸತ್ಯಾಗ್ರಹ ಪ್ರತಿಜ್ಞೆಯ

ಕರಡನ್ನು ಗಾಂಧೀಜಿ ಸಂಪೂರ್ಣವಾಗಿ ಅಂಗೀಕರಿಸಿದರು. ಸತ್ಯಾಗ್ರಹ ಸಿದ್ಧಾಂತದ ತಿರುಳನ್ನು ಅರಗಿಸಿಕೊಂಡಿದ್ದ ಆ ಅಪೂರ್ವ ಕಾರ್ಯದರ್ಶಿ ಬರೆದದ್ದು ಗಾಂಧೀ ಬರಹ, ಆಡಿದ್ದು ಗಾಂಧೀ ಮಾತು. ನಡೆದದ್ದು ಗಾಂಧೀ ಮಾರ್ಗ ಎಂದು ಸಹಕಾರ್ಯಕರ್ತರೆಲ್ಲಾ ಅಂಗೀಕರಿಸಿದರು. ಮುಗ್ಧರಾದ ಹಳ್ಳಿಯ ಜನ ಸಹಸ್ರ ಸಂಖ್ಯೆಯಲ್ಲಿ ಅಹಿಂಸಾ ಸಮರಕ್ಕೆ ಸಿದ್ಧರಾದರು. ಕಷ್ಟ-ನಷ್ಟಗಳನ್ನು ತಾಳ್ಮೆಯಿಂದ ಅನುಭವಿಸಿದರು. ಕಂದಾಯ ಕೊಡಲು ನಿರಾಕರಿಸಿದರು. ಹಲವರು ಸೆರೆಮನೆಗೆ ಹೋದರು. ಹಲವರ ಹೊಲ-ಮನೆಗಳು ಜಪ್ತಿ ಆದವು. ಆದರೂ ಜನ ಹಿಮ್ಮೆಟ್ಟಲಿಲ್ಲ. ಆಧೀರರಾಗಲಿಲ್ಲ. ಕೊನೆಗೆ ಸರ್ಕಾರ ರಾಜಿಗೆ ಒಪ್ಪಿತು. ಜನತೆಯಲ್ಲಿ ಒಂದು ಅಪ್ರತಿಮ ಆತ್ಮಶಕ್ತಿ ಸಂಚಾರವಾದಂತಾಯಿತು. ಎಂಥ ಪ್ರಬಲ ಪ್ರಭುತ್ವವಾದರೂ ನೈತಿಕ ಶಕ್ತಿಗೆ ಒಂದಲ್ಲ ಒಂದು ದಿನ ಮಣಿಯಲೇಬೇಕು ಎಂಬ ವಿಶ್ವಾಸ ಮೂಡಿತು.

## ಜೀವಂತ ವಿಶ್ವಕೋಶ

1919ರ ಪ್ರಾರಂಭದ ವೇಳೆಗೆ ಗಾಂಧೀಜಿ; ಮಹದೇವದೇಸಾಯಿ ಅವರನ್ನು ತಮ್ಮ ಮಾನಸಪುತ್ರ ಮತ್ತು ಉತ್ತರಾಧಿಕಾರಿಯೆಂದು ಘೋಷಿಸಿದರು. ಗಾಂಧೀಜಿಯ ಶಿಷ್ಯರಾದ ಅವರು ಆ ಕಾಲದ ಅಗ್ರಪಂಕ್ತಿಯ ಎಲ್ಲಾ ಮುಖಂಡರಿಗೂ ಮಿತ್ರರಾಗಿದ್ದರು. ಚಿತ್ತರಂಜನ ದಾಸ್, ಮೋತಿಲಾಲ್ ನೆಹರು, ವಿಠ್ಠಲಭಾಯಿ ಪಟೇಲ, ವಲ್ಲಭಭಾಯಿ ಪಟೇಲ್ ಮುಂತಾದವರು ಮಹದೇವದೇಸಾಯಿಯನ್ನು ತಮ್ಮೆಡೆಗೆ ಸೆಳೆದುಕೊಳ್ಳಲೂ ಪ್ರಯತ್ನಿಸಿದರು. ಆದರೆ ಆತನಲ್ಲಿದ್ದ ಏಕನಿಷ್ಠ ಭಕ್ತಿ ಗಾಂಧಿ ಅವರ ಜೀವನ ಕೇಂದ್ರದಲ್ಲಿ ಸ್ಥಾಪಿಸಿತ್ತು. ಆದ್ದರಿಂದ ಬೇರೆಲ್ಲೂ ಹೋಗುವ ಆಕರ್ಷಣೆ ಅವರಿಗೆ ಇರಲೇ ಇಲ್ಲ.

ಗಾಂಧೀಜಿಯ ಬಗ್ಗೆ ಮಹದೇವದೇಸಾಯಿಗೆ ಅಪರಿಮಿತ ಸೇವಾಭಕ್ತಿ. ಅವರ ಬಟ್ಟೆ ಒಗೆಯುತ್ತಿದ್ದರು, ಚಪ್ಪಲಿಯನ್ನು ಸ್ವಚ್ಛಗೊಳಿಸುತ್ತಿದ್ದರು, ಹಣ್ಣಿನ ರಸ ಸಿದ್ಧಪಡಿಸಿಕೊಡುತ್ತಿದ್ದರು. ಗಾಂಧೀಜಿಯ ವ್ಯಾಪಕವಾದ ರಾಜಕೀಯ

ಸಂಬಂಧಗಳ ನಿರ್ವಹಣೆ, ವಿಶಾಲ ಪತ್ರ ವ್ಯವಹಾರಗಳನ್ನು ಪೂರೈಸುವುದು, ದೇಶ-ವಿದೇಶದ ಅತಿಥಿಗಳೊಡನೆ ಚರ್ಚೆ, ಯಂಗ್ ಇಂಡಿಯಾ ಮತ್ತು ಹರಿಜನ ಪತ್ರಿಕೆಯ ಸಂಪಾದನೆ, ಲೇಖನ ಬರೆಯುವುದು, ಗುಜರಾತಿ ಲೇಖನಗಳ ಹಿಂದಿ-ಇಂಗ್ಲಿಷ್ ಅನುವಾದ, ಗಾಂಧೀಜಿಯ ನಿರಂತರ ಪ್ರವಾಸದ ವಿವರವನ್ನು ತಮ್ಮ ಡೈರಿಯಲ್ಲಿ ಬರೆಯುವುದು, ಗಾಂಧೀಜಿ ಜೊತೆ ನಡೆದ ವಾದ-ವಿವಾದಗಳನ್ನು ಲಿಪಿಬದ್ಧವಾಗಿಸುವುದು, ರಸ್ಕಿನ್ ಮತ್ತು ಥೋರೋನ ಸತ್ಯಾಗ್ರಹ ಮೀಮಾಂಸೆಯ ವಿವೇಚನೆ ಮುಂತಾದ ಎಲ್ಲಾ ಕಾರ್ಯಗಳನ್ನು ಕುಶಲತೆಯಿಂದ ಮಹದೇವ್ ಒಬ್ಬರೇ ನಿರ್ವಹಿಸುತ್ತಿದ್ದರು.

ಎತ್ತರದ ನಿಲುವಿನ ಆಕರ್ಷಕ ಮೈಕಟ್ಟಿನಿಂದ ಕೂಡಿದ್ದ ಮಹದೇವದೇಸಾಯಿ ವಿದ್ವಾಂಸರೂ, ರಸಿಕ ಸಾಹಿತಿಯೂ ಆಗಿದ್ದರು. ಪ್ರತಿ ದಿವಸ 18 ರಿಂದ 20 ಗಂಟೆಯವರೆಗೆ ಕೆಲಸ ಮಾಡುತ್ತಿದ್ದರು. ಅವರಿಗೆ ಆಧುನಿಕ ಸಾಹಿತ್ಯದ ಪರಿಚಯವೂ ಇತ್ತು. ಪ್ರತಿಯೊಂದು ವಿಷಯವನ್ನೂ ಆಳವಾಗಿ ಅಧ್ಯಯನ ಮಾಡುತ್ತಿದ್ದರು. ಗಾಂಧಿ ಅವರ ಕಾರ್ಯ ನಿರ್ವಹಿಸುತ್ತಾ ಫ್ರೆಂಚ್ ಭಾಷೆಯನ್ನೂ ಕೂಡ ಕಲಿತರು. ಗುಜರಾತಿ, ಇಂಗ್ಲಿಷ್, ಮರಾಠಿ, ಬಂಗಾಳಿ, ಸಂಸ್ಕೃತ ಭಾಷೆಗಳಲ್ಲಿ ಇವರಿಗೆ ಅದ್ಭುತ ಪಾಂಡಿತ್ಯವಿತ್ತು. ಹೀಗೆ ಮಹದೇವರು ಒಂದು ಜೀವಂತ ವಿಶ್ವಕೋಶವೇ ಆಗಿದ್ದರು. ಗಾಂಧೀಜಿಯ 'ಸಿಂಹಳ ಯಾತ್ರೆ', 'ತಿರುವಾಂಕೂರಿನಲ್ಲಿ ಹರಿಜನ ಯಾತ್ರೆ', 'ಗಡಿನಾಡು ಗಾಂಧಿ' ಮತ್ತು ಅವರಣ್ಣ ಡಾ. ಖಾನ್ ಸಾಹೇಬ್‌ರನ್ನು ಕುರಿತಂತೆ 'ಖುದಾ ಈ ಖಿದಮತ್‌ಗಾರ್' ಹಾಗೂ 'ವೀರ್ ವಿಠಲ ಭಾಯೀ' ಮುಂತಾದ ಕೃತಿಗಳನ್ನು ಬರೆಯುತ್ತಾ ಭಾರತೀಯ ರಾಷ್ಟ್ರೀಯ ಜೀವನ ಚರಿತ್ರೆಗಳನ್ನು ಮಹದೇವರು ಬರೆಯಲಾರಂಭಿಸಿದರು.

ಒಮ್ಮೆ ಮಹದೇವರು ಗಾಂಧಿ ಅವರನ್ನು ಭೇಟಿಯಾಗಲು ಹೋಗಿದ್ದರು. ಗಾಂಧೀಜಿ ಕುರ್ಚಿಯಮೇಲೆ ಕುಳಿತಿದ್ದರು. ಆದರೆ ಮಹದೇವರು ಗೌರವವನ್ನು ತೋರಿಸಲು ನೆಲದ ಮೇಲೆ ಕುಳಿತರು. ಒಮ್ಮೆಲೆ ಗಾಂಧೀಜಿ "ಇದು ನಡೆಯದು, ಈ ಕುರ್ಚಿಯಲ್ಲಿ ಕುಳಿತು ಕೊಳ್ಳಬೇಕು. ಈಗಿನ ಕಾಲದ ಪದ್ಧತಿಗಳನ್ನು ನೀನು ಕಲಿಯಬೇಕು. " ಎಂದು ಹೇಳಿ ಕುರ್ಚಿಯ ಮೇಲೆ

ಕುಳಿತುಕೊಳ್ಳಲು ಒತ್ತಾಯ ಮಾಡಿದರು. ಮಹದೇವನಿಗೆ ಗಾಂಧೀಜಿಯ ಜೊತೆ ಕುರ್ಚಿಯಲ್ಲಿ ಕೂಡಲು ಅಂಜಿಕೆಯಾಗಿ ಕೊನೆಗೂ ನೆಲದ ಮೇಲೆಯೇ ಕುಳಿತುಕೊಂಡರು. ಇದು ಮಹದೇವರಿಗೆ ಗಾಂಧಿ ಬಗ್ಗೆ ಇದ್ದ ಅಗಾಧ ಗೌರವವನ್ನು ಸೂಚಿಸುತ್ತದೆ ಇದನ್ನು ಅವರು ತಮ್ಮ ಜೀವನದುದ್ದಕ್ಕೂ ಅನುಸರಿಸಿದರು.

## ಕಾರ್ಯ ಕೌಶಲ್ಯ

ಮಹದೇವರ ಕಾರ್ಯ ಕೌಶಲ್ಯ ಮಾಧುರ್ಯ ಮತ್ತು ಅತ್ಯುತ್ಕೃಷ್ಟ ಅರ್ಹತೆಯಿಂದಾಗಿ ಅವರನ್ನು ಮಿತ್ರರಷ್ಟೇ ಅಲ್ಲದೆ ಶತ್ರುಗಳೂ ಮೆಚ್ಚುತ್ತಿದ್ದರು. ದೇಶ–ವಿದೇಶದ ಅನೇಕ ಧುರಂಧರ ರಾಜಕಾರಣಿಗಳು, ಪತ್ರಕರ್ತರು, ಗ್ರಂಥಕರ್ತರು, ಅವರನ್ನು ಪ್ರೀತಿಸುತ್ತಿದ್ದರು. ಮಹದೇವರೊಡನೆ ಇರುವಾಗ ಶತ್ರುತ್ವ ಸಾಧ್ಯವಿರಲೇ ಇಲ್ಲ. ಅವರ ಸುಸಂಸ್ಕೃತ ಧ್ವನಿ, ಸಭ್ಯ ಭಾಷೆ ಮತ್ತು ಶಿಷ್ಟಾಚಾರ, ಅವರ ಸಂಯಮಿತ ನಡೆ–ನುಡಿ ಮತ್ತು ಹಾಸ್ಯ–ವಿನೋದಗಳು ಬಹಳ ಆಕರ್ಷಕವಾಗಿದ್ದವು. ಈ ಅಪರೂಪದ ಮಾಧುರ್ಯದಲ್ಲಿ ಕಿಂಚಿತ್ತೂ ಮೂರ್ಖತನ ಎಂಬುದಿರಲಿಲ್ಲ. ನಿಜವಾಗಿ ಹೇಳಬೇಕಾದರೆ ಅವರು ಅಜಾತಶತ್ರುವಾಗಿದ್ದರು.

ಆ ಸಮಯದಲ್ಲಿ ರಾಷ್ಟ್ರೀಯ ಜಾಗೃತಿ ಭಾರತದ ಮೂಲೆಮೂಲೆಗಳಲ್ಲಿ ಮೊಳಗುತ್ತಿತ್ತು. ಬ್ರಿಟಿಷ್ ಸರ್ಕಾರ ಮೊದಲನೆ ಮಹಾಯುದ್ಧದಲ್ಲಿ ವಿಜೇತವಾದರೂ ಭಾರತಕ್ಕೆ ಸ್ವಯಂಆಡಳಿತ ಕೊಡುತ್ತೇವೆಂಬ ವಾಗ್ದಾನವನ್ನು ಮುರಿದಿತ್ತು. ಬದಲಾಗಿ ಗಾಂಧೀಜಿಯ ಮೇಲೂ ರಾಷ್ಟ್ರೀಯವಾದಿಗಳ ಮೇಲೂ ಅತ್ಯಂತ ಕ್ರೂರ ದಬ್ಬಾಳಿಕೆಯ ಹೊಸ ಅಧ್ಯಾಯವನ್ನೇ ಮೊದಲಿಟ್ಟಿತು. ಅಖಿಲಭಾರತ ರಾಜಕಾರಣದಲ್ಲಿ ಗಾಂಧಿ ಪ್ರಭಾವವೂ ಕ್ರಮೇಣ ಹೆಚ್ಚುತ್ತಿತ್ತು. ದೇಶ ಪರ್ಯಟನೆ ಮಾಡುತ್ತಾ ಬಡವರ ಗುಡಿಸಲುಗಳ ಬಳಿ ನಿಂತು ಎಚ್ಚರಿಸುತ್ತಾ ದಾಸ್ಯದ ಶೃಂಖಲೆಗಳನ್ನು ಕಿತ್ತುಬಿಸಾಡಲು ಬುದ್ಧಿಜೀವಿಗಳನ್ನು ಬಡಿದೆಬ್ಬಿಸುತ್ತಾ ಗಾಂಧೀಜಿ ಬಿಡುವಿಲ್ಲದೆ ಪ್ರವಾಸ

ಮಾಡಿದರು. ಮಹದೇವದೇಸಾಯಿ ಇಲ್ಲದೆ ಅವರಿಗೆ ದಿನನಿತ್ಯದ ಕಾರ್ಯಭಾರ ತೂಗಿಸುವುದೇ ಕಷ್ಟವಾಗುತ್ತಿತ್ತು. ಗಾಂಧೀಜಿ ಇದ್ದೆಡೆ ಮಹದೇವದೇಸಾಯಿ ಅನಿವಾರ್ಯ ಎನ್ನುವಂತಾಯಿತು.

## ಮದರಾಸಿನಲ್ಲಿ

ಆ ವರ್ಷ ಅಂದರೆ 1919ರ ಮಾರ್ಚ್ 18ರಂದು ಗಾಂಧೀಜಿ ಮದರಾಸಿಗೆ ಆಗಮಿಸಿದರು. ಅದು ಗಾಂಧಿ ಅವರಿಗೆ ಮದರಾಸಿನ ಆರನೇ ಭೇಟಿಯಾದರೆ ಮಹದೇವದೇಸಾಯಿಗೆ ಪ್ರಥಮ ಭೇಟಿಯಾಗಿತ್ತು. ಮಹದೇವದೇಸಾಯಿ ಮದರಾಸಿನ ಮಿತ್ರರನ್ನೆಲ್ಲಾ ನಿಕಟ ಪರಿಚಯ ಮಾಡಿಕೊಂಡರು. ಆ ಭೇಟಿಯ ಸಿದ್ಧತೆಗಳ ಹಿನ್ನಲೆಯಲ್ಲಿ ಕೆಲಸ ಮಾಡುತ್ತಿದ್ದ ಸಂಕೋಚ ಸ್ವಭಾವದ ರಾಜಗೋಪಾಲಾಚಾರಿ ಅವರೂ ಮಹದೇವರ ನಿಕಟ ಸಂಪರ್ಕಕ್ಕೆ ಬಂದರು. ಮೇಧಾವಿ, ವ್ಯವಹಾರ ಕುಶಲ, ಕುಶಾಗ್ರಮತಿಯಾಗಿದ್ದ ರಾಜಾಜಿ, ಗಾಂಧಿ ಬಳಗಕ್ಕೆ ಅತ್ಯಮೂಲ್ಯ ಬಂಧುವಾಗಬಹುದು ಎಂದು ಮಹದೇವದೇಸಾಯಿಗೆ ಅನಿಸಿತು. ಅವರು ಗಾಂಧೀಜಿಗೆ ನೇರವಾಗಿ "ಇಲ್ಲಿನ ಏರ್ಪಾಟೆಲ್ಲಾ ರಾಜಾಜಿಯದು. ಆತ ಪ್ರತಿಭಾಶಾಲಿ, ಸತ್ಯನಿಷ್ಠರು, ನಿರ್ಭಯ ಸ್ವಭಾವದವರು. ಅವರನ್ನು ನೀವು ಸೆಳೆದುಕೊಳ್ಳಬೇಕು" ಎಂದರು. ಗಾಂಧೀಜಿ ತಮ್ಮ ಆತ್ಮಕಥೆಯಲ್ಲಿ ಬರೆಯುತ್ತಾ "ಮಹದೇವನ ನುಡಿ ಸತ್ಯವಾಗಿತ್ತು. ನಾನು ಆ ಘಳಿಗೆಯಿಂದಲೇ ರಾಜಾಜಿಯೊಡನೆ ಆಪ್ತ ಮೈತ್ರಿ ಬೆಳೆಸಿದೆ" ಎಂದಿದ್ದಾರೆ.

## ಅಸಹಕಾರ ಚಳವಳಿ

ಮಹದೇವದೇಸಾಯಿ ಮತ್ತು ರಾಜಾಜಿಯೊಡನೆ ಸಮಾಲೋಚಿಸಿ 1919ರ ಮಾರ್ಚ್ 30ರಂದು ಮದರಾಸಿನಲ್ಲಿ ಕರಾಳವಾದ ರೌಲಟ್ ಮಸೂದೆ ವಿರುದ್ಧ ಗಾಧೀಜಿ ಸಾರ್ವತ್ರಿಕ ಹರತಾಳಕ್ಕೆ ಕರೆಕೊಟ್ಟರು. ಗಾಂಧೀಜಿ ರಾಜಾಜಿಯ ಬಗ್ಗೆ ವ್ಯಕ್ತಿಶಃ ಅರಿತುದು ಅದೇ ಮೊದಲು. ಗಾಂಧೀಜಿಗೆ

ಪರಮಾಶ್ಚರ್ಯವಾಯಿತು. ಇಡೀ ನಾಡಿನ ಉದ್ದಗಲಕ್ಕೆ ಮಹಾನಗರಗಳಿಂದ ಹಿಡಿದು ಸಣ್ಣ ಸಣ್ಣ ಊರುಗಳಿಗೆ ಆ ಸಂದೇಶ ಮಿಂಚಿನಂತೆ ಹೋಗಿ ಮುಟ್ಟಿ ಅಭೂತಪೂರ್ವ ರಾಷ್ಟ್ರೀಯ ಜನಶಕ್ತಿ ಹರತಾಳದಲ್ಲಿ ಪ್ರಕಟವಾಯಿತು. ಅದರ ಪರಿಣಾಮವಾಗಿ ಬ್ರಿಟಿಷ್ ಸಾಮ್ರಾಜ್ಯಶಾಹಿ ಕ್ರೋಧದಿಂದ ಕುರುಡಾಯಿತು. ತನ್ನ ಅಗಾಧ ಶಸ್ತ್ರಶಕ್ತಿಯನ್ನೆಲ್ಲಾ ಭಾರತದ ನಿಶ್ಶಸ್ತ್ರ ನಿರುಪದ್ರವಿ ಜನಕೋಟಿಯ ಮೇಲೆ ಅತ್ಯಂತ ಕ್ರೂರ ರೀತಿಯಲ್ಲಿ ಪ್ರಯೋಗಿಸಿತು.

ಏಪ್ರಿಲ್ ಐದರಂದು ಇಡೀ ರಾತ್ರಿ ಮಹದೇವದೇಸಾಯಿ ಎಚ್ಚರವಿದ್ದು ಅಮೆರಿಕನ್ ದಾರ್ಶನಿಕ ಥೋರೋನ 'ಆನ್ ಸಿವಿಲ್ ಡಿಸೋಬಿಡಿಯನ್ಸ್' ಪ್ರಬಂಧದ ಪ್ರಕಟಣಾ ನಿಯಮೋಲ್ಲಂಘನೆ ಮಾಡಿ ಅನುವಾದವನ್ನು ಪುಸ್ತಕ ರೂಪದಲ್ಲಿ ಮುಂಬಯಿಯಿಂದ ಪ್ರಕಟಿಸಿದರು. 1919ರ ಏಪ್ರಿಲ್ ಆರರಂದು ಸಂಜೆ ಮುಂಬಯಿ ಮಹಾನಗರದ ರಸ್ತೆಗಳಲ್ಲಿ ಹಿಂದೂ, ಮುಸ್ಲಿಂ ಹಾಗೂ ಪಾರ್ಸಿ ಮಹಿಳೆಯರು ಆ ಪುಸ್ತಕದ ಸಾವಿರಾರು ಪ್ರತಿಗಳನ್ನು ಎಲ್ಲರೆದುರಿಗೆ ಮಾರಿ ಕಾನೂನನ್ನು ಸವಿನಯವಾಗಿ ಉಲ್ಲಂಘಿಸಿದರು. ಬ್ರಿಟಿಷರು ತಮ್ಮ ಸಾಮ್ರಾಜ್ಯದಲ್ಲಿ ಎಂದೂ ಸೂರ್ಯಾಸ್ತ ಆಗುವುದೇ ಇಲ್ಲವೆಂದು ಜಂಬ ಕೊಚ್ಚಿಕೊಳ್ಳುತ್ತಿದ್ದರು. ಅಂತಹ ಶಕ್ತಿಯುತವಾದ ಬ್ರಿಟಿಷ್ ಸಾಮ್ರಾಜ್ಯಕೂಡ ಇಂತಹ ಅಹಿಂಸಾತ್ಮಕ ದೃಢ ವಿರೋಧವನ್ನು ಕಂಡು ನಡುಗಿತ್ತು. ಗಾಂಧಿ ಅವರ ಜೊತೆ ಮಹದೇವದೇಸಾಯಿಯ ಬರೆಹ ದೇಶದ ವಾತಾವರಣವನ್ನೇ ಬದಲಾಯಿಸಿತ್ತು. ಹೆದರಿದ್ದ ದೇಶವಾಸಿಗಳಲ್ಲಿ ಜಾಗೃತಿಯ ಅಲೆಯೆದ್ದು ಲಕ್ಷಾಂತರ ಮಂದಿ ಸ್ವಾತಂತ್ರ್ಯಕ್ಕಾಗಿ ನಗು-ನಗುತ್ತಾ ಪ್ರಾಣಾರ್ಪಣೆ ಮಾಡಿದರು. ಇದರ ಪರಿಣಾಮವಾಗಿ 1919ರ ಏಪ್ರಿಲ್ 13ರಂದು ಪಂಜಾಬಿನ ಅಮೃತಸರದಲ್ಲಿ ಜಲಿಯನ್‌ವಾಲಾಬಾಗ್ ಹತ್ಯಾಕಾಂಡ ನಡೆಯಿತು.

ರಾಜಕೀಯ ಕ್ಷೇತ್ರಕ್ಕೆ ಗಾಂಧೀ ಮಾರ್ಗ ಹೊಚ್ಚ ಹೊಸದು. ಹೋರಾಟದ ಜೊತೆಜೊತೆಯಲ್ಲಿಯೇ ಸ್ನೇಹ ಸಂಧಾನಗಳ ಕೌಶಲವೂ ಬೆರೆತಿರುತಿತ್ತು. ಸತ್ಯಾಗ್ರಹದಲ್ಲಿ ಯಾವ ವ್ಯಕ್ತಿಯ ಮೇಲೂ ಆಕ್ರೋಶವಾಗಲಿ, ಕ್ರೋಧವಾಗಲಿ ನಿಷಿದ್ಧ. ಎದುರು ಪಕ್ಷದ ತಪ್ಪನ್ನು ಅವರಿಗೆ ಮನನ ಮಾಡಿಕೊಟ್ಟು ಪರಿವರ್ತನೆಗೆ ಸಹಕಾರ ನೀಡುವುದು

ಸತ್ಯಾಗ್ರಹಿಯ ಕರ್ತವ್ಯ. ಎಲ್ಲೆಲ್ಲಿ ಕಠೋರತೆ ಕರಗಿ ಕೋಮಲತೆಯ ವಿಕಾಸವಾಗಬೇಕೋ ಅಲ್ಲಿ ಮಹದೇವದೇಸಾಯಿ ಪ್ರತ್ಯಕ್ಷವಾಗುತ್ತಿದ್ದರು. ಗಾಂಧೀಜಿ ದಸ್ತಗಿರಿಯಾದಾಗಲೆಲ್ಲಾ ರಾಷ್ಟ್ರ ನಾಯಕರೆಡೆಗೆ ಧಾವಿಸಿ ಅವರ ಆಪ್ತ ಸಂದೇಶಗಳನ್ನು ಮುಟ್ಟಿಸುತ್ತಿದ್ದರು. ಜಲಿಯನ್ ವಾಲಾಬಾಗ್ ಹತ್ಯಾಕಾಂಡದ ನಂತರ ಪಂಜಾಬಿಗೆ ಪ್ರವೇಶಿಸಲು ಗಾಂಧೀಜಿ ಧಾವಿಸಿದಾಗ ಮಹದೇವದೇಸಾಯಿ ಜೊತೆಯಲ್ಲೇ ಇದ್ದರು. ಬ್ರಿಟಿಷ್ ಅಧಿಕಾರಿಗಳು ನಿರ್ಬಂಧಾಜ್ಞೆ ಹಾಕಿದರು. ಮಹದೇವದೇಸಾಯಿ ಪ್ರಬಲವಾಗಿ ಪ್ರತಿಭಟಿಸಿ ವಾದ ಮಾಡಿದರು. ಕೊನೆಗೆ ಗಾಂಧೀಜಿ ನಿಷೇಧಾಜ್ಞೆಯನ್ನುಲ್ಲಂಘಿಸಿ ದಸ್ತಗಿರಿಯಾದರು. ಮಹದೇವದೇಸಾಯಿಯನ್ನು ಕೂಡಲೇ ದೆಹಲಿಗೆ ಕಳುಹಿಸಿದರು. ಅಲ್ಲಿ ಸ್ವಾಮಿ ಶ್ರದ್ಧಾನಂದರಿಗೆ ತಮ್ಮ ಕಾರ್ಯ ಮುಂದುವರಿಸಲು ಸಂದೇಶ ಕಳುಹಿಸಿದರು. ಸ್ವಾಮಿಶ್ರದ್ಧಾನಂದ, ಮೋತಿಲಾಲ್ ನೆಹರು, ಬಾಬು ರಾಜೇಂದ್ರಪ್ರಸಾದ್, ರವೀಂದ್ರನಾಥ ಠಾಗೂರ್ ಮತ್ತು ಆಚಾರ್ಯ ಕೃಪಾಲಾನಿ ಮುಂತಾದವರೊಡನೆ ನಿಕಟ ಸಂಪರ್ಕ ಇಟ್ಟುಕೊಳ್ಳುವ ಮೂಲಕ ಮಹದೇವದೇಸಾಯಿ ಸ್ವಾತಂತ್ರ್ಯ ಸಂಗ್ರಾಮಕ್ಕೆ ಪ್ರವೇಶಿಸಿದರು

## ಪತ್ರಿಕೋದ್ಯಮ

1919ರ ಅಕ್ಟೋಬರ್‌ನಲ್ಲಿ ಅಹಮದಾಬಾದ್‌ನ ಸಬರಮತಿ ಆಶ್ರಮದಿಂದ ಗುಜರಾತಿ ಭಾಷೆಯಲ್ಲಿ 'ನವಜೀವನ', ಆಂಗ್ಲ ಭಾಷೆಯಲ್ಲಿ 'ಯಂಗ್ ಇಂಡಿಯಾ' ಪತ್ರಿಕೆಗಳು ಪ್ರಕಟವಾಗುವ ಏರ್ಪಾಡಾಯಿತು. ಗಾಂಧೀಜಿಯೇ ಸಂಪಾದಕರು, ಮಹದೇವದೇಸಾಯಿ ಪ್ರಕಾಶಕರು. ಶಂಕರಲಾಲ್ ಬ್ಯಾಂಕರ್ ಮುದ್ರಕರು. ವ್ಯವಸ್ಥೆಯ ಸಂಪೂರ್ಣ ಹೊಣೆ ಮಹದೇವದೇಸಾಯಿಯದು. ಸಮಯಕ್ಕೆ ಸರಿಯಾಗಿ ಎಡೆಬಿಡದೆ ಲಕ್ಷಾಂತರ ಕಾರ್ಯಕರ್ತರಿಗೆ ಅಧಿಕೃತ ಸಂದೇಶಗಳು ಈ ಪತ್ರಿಕೆಯ ಮೂಲಕ ಸೇರುತ್ತಿದ್ದವು. "ಇದೊಂದು ವೃತ್ತ ಪತ್ರಿಕೆ ಅಲ್ಲ, ನನ್ನ ವಿಚಾರ ಪ್ರತಿಪಾದಕ ಪತ್ರಿಕೆ" ಎಂದರು ಗಾಂಧೀಜಿ. ಮಹದೇವದೇಸಾಯಿಯ ದಿನಚರಿ, ಅವರ ವಿಶೇಷ ವರದಿಗಳು, ಗಾಂಧೀಜಿಯೊಡನೆ ನಡೆಯುತ್ತಿದ್ದ ವಿವಿಧ ಚರ್ಚೆ ಎಲ್ಲವೂ ವಿಧಿವತ್ತಾಗಿ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿತ್ತು.

ಆಯಾ ದಿನದ ವರದಿ ಅಂದಂದೇ ಸಿದ್ಧವಾಗಿ ಗಾಂಧೀಜಿಯ ಪರಿಶೀಲನೆಗೆ ಹೋಗಿ, ಪೂರ್ಣ ಪಾಠ ಅಚ್ಚಿಗೆ ಸಿದ್ಧವಾಗುತ್ತಿತ್ತು. ಯಾವ ಮೂಲೆಯಲ್ಲಿ ಪ್ರವಾಸ ಮಾಡುತ್ತಿರಲಿ, ಮೆರವಣಿಗೆಗಳಲ್ಲಿರಲಿ, ಸೆರೆಮನೆಯಲ್ಲಿರಲಿ, ಊಟಮಾಡುತ್ತಿರಲಿ, ವಿಶ್ರಾಂತಿಯಲ್ಲಿರಲಿ ಮಹದೇವದೇಸಾಯಿಯ ಲೇಖನಿ ನಿರಂತರವಾಗಿ ಹರಿಯುತ್ತಿತ್ತು. ಯಾವ ಕಷ್ಟ-ನಿಷ್ಟುರಗಳನ್ನು ಲೆಕ್ಕಿಸದೆ ಎಲ್ಲವನ್ನೂ ಬರೆದು ಮುಗಿಸಿ ನಿಯಮಿತ ಕಾಲಕ್ಕೆ ಸರಿಯಾಗಿ ಕರಡು ಪ್ರತಿಯನ್ನು ಮುದ್ರಣಾಲಯಕ್ಕೆ ತಲುಪಿಸುತ್ತಿದ್ದರು. ಆ ಪತ್ರಿಕೆ ಜಾಹೀರಾತುಗಳನ್ನು ತೆಗೆದುಕೊಳ್ಳುತ್ತಿರಲಿಲ್ಲ. ಮಹಾನ್ ನಾಯಕನ ವಿಚಾರ ಪ್ರಸಾರಕ್ಕಾಗಿಯೇ ಮೀಸಲಾಗಿದ್ದು ಓದುಗರ ಸಂಖ್ಯಾ ಬಲದ ಮೇಲೆ ಮಾತ್ರ ಅವಲಂಬಿತವಾಗಿರುವ ಮತ್ತೊಂದು ಪತ್ರಿಕೆ ಜಗತ್ತಿನಲ್ಲೇ ಸಿಗದು.

1921ರ ಜುಲೈನಲ್ಲಿ ಮೋತಿಲಾಲ್ ನೆಹರು ಅಲಹಾಬಾದಿನಿಂದ 'ಇಂಡಿಪೆಂಡೆಂಟ್' ಎಂಬ ಪತ್ರಿಕೆಯನ್ನು ಹೊರಡಿಸಲಾರಂಭಿಸಿದರು. ಆಗ ಕೆಲವು ಸಮಸ್ಯೆಗಳು ಎದುರಾದಾಗ ಮೋತಿಲಾಲರು ಮಿತ್ರ ಗಾಂಧೀಜಿಯಲ್ಲಿ ಮಹದೇವದೇಸಾಯಿವರ ನೆರವನ್ನು ನೀಡಲು ಬೇಡಿದರು. ಗಾಂಧೀಜಿ ಅಲಹಾಬಾದ್ ನಗರಕ್ಕೆ ಅವರನ್ನು ಕಳುಹಿಸಿಕೊಟ್ಟರು. ಆ ಪತ್ರಿಕೆಯಲ್ಲಿ ಪ್ರಕಟವಾಗುತ್ತಿದ್ದ ಬರಹಗಳು ಸರಕಾರದ ಆಕ್ರೋಶಕ್ಕೆ ಗುರಿಯಾಯಿತು. ಸಂಪಾದಕ ಜಾರ್ಜ್ ಜೋಸೆಫ್, ಮೋತೀಲಾಲ್ ನೆಹರು ಮತ್ತು ಜವಾಹರಲಾಲ್ ನೆಹರು ದಸ್ತಗಿರಿಯಾದರು. ಮತ್ತು ಅಚ್ಚುಕೂಟಕ್ಕೆ ಬೀಗಮುದ್ರೆ ಹಾಕಿತು. ಮಹದೇವದೇಸಾಯಿ "ಐ ಶಲ್ ನಾಟ್ ಡೈ-ನಾನು ಖಂಡಿತ ಸಾಯುವುದಿಲ್ಲ" ಎಂಬ ಶೀರ್ಷಿಕೆಯೊಂದಿಗೆ ಸಂಪಾದಕೀಯವನ್ನು ಬರೆದು ಸೈಕ್ಲೋಸ್ಟೈಲ್ ಪ್ರತಿಗಳನ್ನು ಪ್ರಕಟಿಸಿದರು[2]. ಮೋತಿಲಾಲರು ಮಹದೇವದೇಸಾಯಿ ಅವರ ಆ ಮಹತ್ತರ ಸಹಕಾರಕ್ಕೆ ಕೃತಜ್ಞತೆ ವ್ಯಕ್ತಪಡಿಸಿದರು. ಆಗ್ಗೆ ಮಹದೇವದೇಸಾಯಿ ಅಖಿಲ ಭಾರತ ವೃತ್ತಪತ್ರಿಕೆ ಸಂಪಾದಕರ ಸಮಾವೇಶದ ಸಂಸ್ಥಾಪಕ ಸದಸ್ಯರಲ್ಲಿ ಒಬ್ಬರಾಗಿದ್ದರು.

# ಪ್ರಥಮ ಬಾರಿ ಬಂಧನ

ಸರ್ಕಾರವು 1921ರ ಡಿಸೆಂಬರ್ 24ರ ರಾತ್ರಿ ಮಹದೇವದೇಸಾಯಿಯನ್ನು ವಸಾಹತುಶಾಹಿ ಸರ್ಕಾರವು ಬಂಧಿಸಿತು. ಕಡು ಕಷ್ಟಕೊಟ್ಟರು. ಹಿಂಸೆ ನೀಡಿ ಕೊಲೆ ಮಾಡಿದ ಅಪರಾಧಿ ಕೈದಿಗಳ ಜೊತೆ ಆಗ್ರಾ ಸೆರೆಮನೆಯಲ್ಲಿ ಒಂದು ವರ್ಷ ಅವರನ್ನು ಬಂಧನದಲ್ಲಿಟ್ಟಿತ್ತು. ಆಗ ದೇವದಾಸ್ ಗಾಂಧಿಗೆ ಅವರು ಪತ್ರಿಕೆಯನ್ನೊಪ್ಪಿಸಿದರು. ದುರ್ಗಾಬೆಹೆನ್ ಗಂಡನ ದಸ್ತಗಿರಿಯಿಂದ ಭಯಗೊಳ್ಳದೆ ಪತ್ರಿಕೆಯ ಕೆಲಸಕ್ಕೆ ತಾನೇ ನಿಂತಳು. ಪಂಡಿತ ಮದನಮೋಹನ ಮಾಳವೀಯ ಅವರು ಅಲ್ಲಿಗೆ ಬಂದು ನೋಡಿ, ಹೆಚ್ಚಿನ ಶಿಕ್ಷಣ ಪಡೆಯದಿದ್ದರೂ ಪತಿಯ ಮನೋಧರ್ಮವನ್ನರಿತು, ಗಾಂಧೀಜಿಯ ಮಾರ್ಗದರ್ಶನ ಪಡೆದಿದ್ದ ದುರ್ಗಾಬೆಹನ್ನಳ ಸೇವೆಯನ್ನು ಮುಕ್ತಕಂಠದಿಂದ ಹೊಗಳಿದರು. ಮಹದೇವದೇಸಾಯಿಗೆ ಒಂದು ವರ್ಷ ಸೆರೆಮನೆ ವಾಸದ ಜೊತೆಗೆ 100 ರೂಪಾಯಿ ದಂಡ ವಿಧಿಸಿದರು. ದಂಡ ನೀಡಲು ತಪ್ಪಿದಲ್ಲಿ ಒಂದು ತಿಂಗಳು ಅಧಿಕ ಶಿಕ್ಷೆ ಅನುಭವಿಸಬೇಕಾಗಿತ್ತು.

ಉತ್ತರಪ್ರದೇಶದ ಸೆರೆಮನೆಗಳಲ್ಲಿ ಖೈದಿಗಳನ್ನು ಅತ್ಯಂತ ಹೀನವಾಗಿ ಕಾಣುತ್ತಿದ್ದ ಬಗ್ಗೆ 'ನವಜೀವನ' ಪತ್ರಿಕೆಯಲ್ಲಿ ಖಂಡನೆಯ ಲೇಖನಗಳು ಬಂದವು. ಮೊದಲ ಕೆಲವು ದಿನಗಳು ಮಹದೇವದೇಸಾಯಿಗೆ ಸೆರೆವಾಸ ಅಸಹನೀಯವಾಯಿತು. ಗಾಂಧೀಜಿಗೆ ಪತ್ರ ಬರೆದರು. ಆ ಕೂಡಲೇ ಗಾಂಧೀಜಿ ಉಗ್ರವಾಗಿ ಪ್ರತಿಭಟಿಸಿ ಉತ್ತರಪ್ರದೇಶ ಸರಕಾರಕ್ಕೆ ಬರೆದರು. "ಮಹದೇವದೇಸಾಯಿಯೇ ಬರೆದು ತಿಳಿಸಿರುವುದರಿಂದ ನಾನು ಯಾವ ಬೇರೆ ಸಾಕ್ಷ್ಯವನ್ನೂ ಬಯಸದೆ ಪ್ರತಿಭಟಿಸುತ್ತಿದ್ದೇನೆ" ಎಂದರು. ಹತ್ತು ದಿನಗಳ ನಂತರ ಮಹದೇವದೇಸಾಯಿಯನ್ನು ಸೆರೆಮನೆಯಲ್ಲಿ ಬೇರೆ ವರ್ಗಕ್ಕೆ ಬದಲಾಯಿಸಿದರು. ಆಗ ಇತರ ಖೈದಿಗಳ ಬಗ್ಗೆಯೂ ನಡೆಯುತ್ತಿದ್ದ ಕ್ರೂರ ದಂಡನೆಗಳು ನಿಂತವು.

ಅದೇ ವೇಳೆಗೆ ತಂದೆಯಾದ ಹರಿಭಾಯಿ ದೇಸಾಯಿಯ ಎರಡನೇ ಹೆಂಡತಿಯಲ್ಲಿ ಹುಟ್ಟಿದ್ದ ಮಗಳಿಗೆ ಲಗ್ನ ಮಾಡಬೇಕಾಯಿತು.

ಸೆರೆಮನೆಯಿಂದಲೇ ಮಹದೇವದೇಸಾಯಿ "ನನ್ನ ಬ್ಯಾಂಕ್ ಲೆಕ್ಕದಲ್ಲಿ 2600 ರೂ. ಗಳನ್ನಿಟ್ಟಿದ್ದೇನೆ, ದಯಮಾಡಿ ನಿಮ್ಮ ಸಮಯಕ್ಕೆ ಅದನ್ನು ಉಪಯೋಗಿಸಿ" ಎಂದು ಬರೆದರು. ತಂದೆಯ ಹೃದಯ ತುಂಬಿ ಬಂತು. ಮಹದೇವದೇಸಾಯಿಯನ್ನು 1923ರ ಜನವರಿ 23ರಂದು ಉತ್ತರ ಪ್ರದೇಶದ ಲಕ್ನೋ ಸೆರೆಮನೆಯಿಂದ ಬಿಡುಗಡೆ ಮಾಡಲಾಯಿತು.

ಸೆರೆಮನೆಯಿಂದ ಬಂದ ಕೆಲ ದಿನಗಳಲ್ಲೇ ಮಹದೇವದೇಸಾಯಿಯ ತಂದೆ ಹರಿಭಾಯಿ ದೇಸಾಯಿ ಹಠಾತ್ತನೆ ಮರಣ ಹೊಂದಿದರು. ಆ ಸುದ್ದಿ ಆಶ್ರಮಕ್ಕೆ ತಲುಪಿತು. ತಕ್ಷಣ ಸೂರತ್ ಜಿಲ್ಲೆಯ ದಿಹೆನ್ ಗ್ರಾಮಕ್ಕೆ ಮಹದೇವದೇಸಾಯಿ ಧಾವಿಸಿ ಬಲತಾಯಿ, ಬಲ ಸೋದರಿಯರನ್ನು ಸಾಂತ್ವನಗೊಳಿಸಿದರು. ಆ ದುಃಖ ಮಹದೇವದೇಸಾಯಿಗೂ ಸಹಿಸಲು ಕಷ್ಟವಾಯಿತು. ಪ್ರೀತಿಯ ತಂದೆಯ ನೆನಪು ಹೆಜ್ಜೆಹೆಜ್ಜೆಗೂ ಮರುಕಳಿಸುತ್ತಿತ್ತು.[3]

## ಗಾಂಧೀಜಿಗೆ ಶಸ್ತ್ರಚಿಕಿತ್ಸೆ

**1924**ರ ಜನವರಿ **11**ರಂದು ಗಾಂಧೀಜಿ ಪೂನಾದ ಯರವಾಡ ಸೆರಮನೆಯಲ್ಲಿದ್ದಾಗ ಅವರಿಗೆ ಅಪೆಂಡಿಸೈಟಿಸ್ ನೋವು ತಡೆಯಲಾಗದ ಸಂಕಟ ಬಂದೊದಗಿತು. ಅಗ ತಕ್ಷಣ ಗಾಂಧೀಜಿ ಅವರನ್ನು ಸೆರೆಮನೆಯಿಂದ ಬಿಡುಗಡೆ ಮಾಡಿ ಅಲ್ಲಿನ ಸಸೂನ್ ಆಸ್ಪತ್ರೆಗೆ ಕರೆತಂದರು ಮರುದಿವಸವೇ ಕರ್ನಲ್ ಮ್ಯಾಡಕ್ ಅವರು ಶಸ್ತ್ರಚಿಕಿತ್ಸೆ ಮಾಡಿದರು. ದೇಶಕ್ಕೆ ದೇಶವೇ ಆತಂಕಗೊಂಡಿತ್ತು. ಆ ಸಮಯದಲ್ಲಿ ಮಹದೇವದೇಸಾಯಿಯೊಬ್ಬರೇ ಗಾಂಧೀಜಿಯ ಬಳಿಯಲ್ಲಿದ್ದದ್ದು. ಕಸ್ತೂರಿಬಾಗೂ ಅಲ್ಲಿರಲು ಅನುಮತಿ ಕೊಡಲಿಲ್ಲ. ಆ ದಿನವನ್ನು ನೆನೆದು ಮಹದೇವದೇಸಾಯಿ ಹೀಗೆ ಬರೆದಿದ್ದಾರೆ. "ಅಂದು ಶಸ್ತ್ರಚಿಕಿತ್ಸೆಯ ಆ ಕೋಣೆ ಜಗತ್ತಿನ ಬೆಳಕನ್ನು ತನ್ನ ಹಿಡಿಯಲ್ಲಿ ಹಿಡಿದಿತ್ತು. ಜೀವಂತ ಪ್ರೇಮ ಅರಳಿ ಸರ್ವವನ್ನೂ ವ್ಯಾಪಿಸಿ ಪಾವನಗೊಳಿಸುತ್ತಿದ್ದ ಆ ಚೇತನದ ಕಾಲ, ದೇಶಾತೀತವಾಗಿ ಬೆಳಗುವಂತೆ ಭಾಸವಾಗುತ್ತಿತ್ತು. ಅವರ ಬಳಿ ಸಾರಿದ ಹೃದಯಗಳಲ್ಲಿ ಕರುಣೆ ಮೈತ್ರಿಗಳು

ತುಂಬಿ ತುಳುಕುತ್ತಿದ್ದವು. ಈ ಆಪತ್ತಿನಿಂದ ಮಾನವ ಕುಲ ಪಾರಾಗಲಿ" ಎಂಬುದೇ ಏಕೈಕ ಪ್ರಾರ್ಥನೆ"– ಎಂದು ದಾಖಲಿಸಿದರು.

ಹಿಂದು–ಮುಸ್ಲಿಂ ಐಕ್ಯತೆಗಾಗಿ 1924ರ ಸೆಪ್ಟೆಂಬರ್ 17ರಿಂದ ಅಕ್ಟೋಬರ್ ಎಂಟರವರೆಗೆ ಮೂರುವಾರಗಳ ಕಾಲ ದೆಹಲಿಯಲ್ಲಿ ಗಾಂಧೀಜಿ ಉಪವಾಸ ಕೈಗೊಂಡರು. ಮಹದೇವದೇಸಾಯಿ ಆತಂಕಗೊಂಡು 'ಇದೊಂದೇ ಮಾರ್ಗವೇ?'ಎಂದು ಪ್ರಬಲವಾಗಿ ವಾದಿಸಿದರು. ಗಾಂಧೀಜಿ ಸಂಕಲ್ಪಬದ್ಧರಾಗಿದ್ದರು. ಅನುನಯದ ಶುಶ್ರೂಷೆ, ಅನುದಿನದ ಕಾರ್ಯದರ್ಶಿತ್ವ, ಆತ್ಮ–ಸಮರ್ಪಣಾ ಸೇವೆ ಸಲ್ಲಿಸುತ್ತಾ ಉಪವಾಸದ ಯಶಸ್ವೀ ಮುಕ್ತಾಯಕ್ಕೆ ಮಹದೇವದೇಸಾಯಿ ಅನನ್ಯ ಭಕ್ತಿಯಿಂದ ಶ್ರಮಿಸಿದರು.

ಮಹದೇವದೇಸಾಯಿ ತುಂಬು ಪ್ರೇಮದ ಸಂಸಾರಿ. ದುರ್ಗಾ ಬಹೆನ್‌ರೊಡನೆ ಅವರ ದಾಂಪತ್ಯ ಹಾಲು ಸಕ್ಕರೆ ಬೆರೆದಂತಿತ್ತು. 1924ರ ಡಿಸೆಂಬರ್ 24ರಂದು ಪುತ್ರ ನಾರಾಯಣ ದೇಸಾಯಿ ಹುಟ್ಟಿದ್ದ. ಆತನನ್ನು ಗಾಂಧೀಜಿ ಮುದ್ದಿಗಾಗಿ 'ಬಾಬ್ಲ' ಎಂದು ಕರೆಯುತ್ತಿದ್ದರು. ತಂದೆಯ ಪ್ರಸನ್ನತೆ, ತಾಯಿಯ ವಾತ್ಸಲ್ಯ, ಬಾಪುವಿನ ಪ್ರೇಮ ನಾರಾಯಣನನ್ನು ರೂಪಿಸಿತು.

1924ರ ಡಿಸೆಂಬರ್ ಕೊನೆಯ ವಾರದಲ್ಲಿ ಬೆಳಗಾಂವಿಯಲ್ಲಿ 39ನೇ ಕಾಂಗ್ರೆಸ್ ಅಧಿವೇಶನ ನಡೆಯಿತು. ಅಧಿವೇಶನದ ಬಗ್ಗೆ ಮಹದೇವದೇಸಾಯಿ ಈ ರೀತಿಯಲ್ಲಿ ಸ್ಮರಿಸಿದ್ದಾರೆ. "ಬೆಳಗಾವಿ ಅಧಿವೇಶನದ ನೆನಪು ಪುಣ್ಯತೀರ್ಥದ ರೂಪದಲ್ಲಿಯೇ ಆಗುತ್ತದೆ. ಗಾಂಧೀಜಿ ಅಧ್ಯಕ್ಷರಾಗಿ ಬಂದಿದ್ದು ಕರ್ನಾಟಕದ ಭಾಗ್ಯವೆನ್ನಬಹುದು. ಏಳೆಂಟು ದಿನ ಗಾಂಧಿ ಅವರ ವಿಚಾರ ಕಾರ್ಯಕ್ರಮಗಳಿಂದ ಬೆಳಗಾವಿಯ ವಾತಾವರಣವು ಪುನೀತವಾಗಿತ್ತು. ಎಲ್ಲಾ ರಾಷ್ಟ್ರೀಯ ನಾಯಕರು ಗಾಂಧೀ ಅವರ ವಿಚಾರಧಾರೆಯಿಂದ ಪ್ರಭಾವಿತರಾಗಿದ್ದರು. ಗಂಗಾಧರರಾಯರ ನಿರ್ಮಲ ಪ್ರೇಮದಿಂದ ತುಂಬಿದ ವಾತಾವರಣ ಶಿಕ್ಷಣ ಹಾಗೂ ಅಜ್ಞಾಪಾಲನೆಯ

ರಹಸ್ಯವನ್ನು ತಿಳಿದ ಸ್ವಯಂ ಸೇವಕರ ಭಕ್ತಿ ಮತ್ತು ಶಿಸ್ತು ಸಮ್ಮೇಳನದ ಯಶಸ್ಸಿಗೆ ಕಾರಣಗಳಾದವು. ಬೆಳಗಾವಿ ಅಧಿವೇಶನದ ಸಂದರ್ಭದಲ್ಲಿ ಗಂಗಾಧರ ದೇಶಪಾಂಡೆ ಅವರು ಅತ್ಯುತ್ತಮ ನಾಯಕರಾಗಿ ಬೆಳೆಯಲು ಅವಕಾಶವಾಯಿತು. ಅವರಲ್ಲದೆ ಇತರ ನಾಯಕರು ರೂಪುಗೊಂಡರು. ಅನೇಕ ಸ್ವಾತಂತ್ರ್ಯ ಯೋಧರು ಬೆಳಗಾವಿ ಅಧಿವೇಶನದಲ್ಲಿ ದೀಕ್ಷೆ ಪಡೆದು ಪ್ರಸಿದ್ಧ ನಾಯಕರಾದರು."

ಗೃಹಸ್ಥರಾಗಿದ್ದುಕೊಂಡೇ ಮಹದೇವದೇಸಾಯಿ ಅತ್ಯುಚ್ಚಮಟ್ಟದ ಸಾಧಕರಾಗಿದ್ದರು. ದೈವಭಕ್ತರಾಗಿದ್ದರು. ಏಕಮಾತ್ರ ಪುತ್ರನ ಪ್ರೀತಿಯ ತಂದೆ ಆಗಿದ್ದರೂ ಅವರ ಜೀವನ ಅಧ್ಯಾತ್ಮಿಕತೆಯಲ್ಲಿ ಮುಳುಗಿತ್ತು. ಎಡಬಿಡದೆ ಓದು-ಬರಹ ಮತ್ತು ಸೂಕ್ಷ್ಮ ನಿರೀಕ್ಷಣ ಮತ್ತು ಜಾಗರೂಕ ಆತ್ಮಪರೀಕ್ಷೆಯ ಮುಖಾಂತರ ನಿರಂತರ ಬಾಹ್ಯ ಮತ್ತು ಆಂತರಿಕ ಯೋಗ್ಯತೆಯನ್ನು ಹೆಚ್ಚಿಸಿಕೊಳ್ಳಲು ಕೊನೆಯವರೆಗೂ ಸಾಧನೆ ಮಾಡುತ್ತಲೇ ಇದ್ದರು. ಎಷ್ಟೋ ಬಾರಿ ಗಾಂಧೀಜಿ ಹೇಳುವುದಕ್ಕೂ ಮೊದಲೇ ಮಹದೇವದೇಸಾಯಿ ಅವರ ವಿಚಾರಗಳ ದೃಶ್ಯವನ್ನು ಲಿಖಿತರೂಪದಲ್ಲಿ ಸಾದರಪಡಿಸುತ್ತಿದ್ದರು. ಗಾಂಧೀಜಿ ಅವರ ತುಸು ಮಾನಸಿಕ - ಶಾರೀರಕ ಅನಾರೋಗ್ಯವೂ ಮಹದೇವದೇಸಾಯಿಗೆ ಚಿಂತೆಯ ವಿಷಯವಾಗಿಬಿಡುತ್ತಿತ್ತು.

ಗುಜರಾತಿ ಭಾಷೆಯಲ್ಲಿದ್ದ ಗಾಂಧಿ ಅವರ ಆತ್ಮ ಚರಿತ್ರೆಯನ್ನು ದೇಸಾಯಿ ಅವರು ಇಂಗ್ಲಿಷಿಗೆ ಭಾಷಾಂತರ ಮಾಡಿ ಯಂಗ್ ಇಂಡಿಯಾದಲ್ಲಿ ಸರಣಿ ಪ್ರಕಟಣೆಯನ್ನು 1925ರಿಂದ ಆರಂಭಿಸಿದರು. ಇವುಗಳ ಜೊತೆಗೆ ರವೀಂದ್ರನಾಥ ಠಾಗೂರ್‌ರವರ ಬಂಗಾಲಿ ಸಾಹಿತ್ಯವನ್ನು ಇಂಗ್ಲಿಷ್ ಭಾಷೆಯಲ್ಲಿ ಅನುವಾದಿಸಿದರು. ಆಗ ಅಂಕಲೇಶ್ವರ ತಾಲೂಕಿನ ಗಡಖೋಲ್ ಗ್ರಾಮದಲ್ಲಿ ಅರ್ಜುನ ಭಾಗವತರ ಭಕ್ತಿಗೀತೆಗಳು ಜನಪ್ರಿಯವಾಗಿದ್ದವು. ಮಹದೇವ ಅವುಗಳನ್ನು ಸಂಗ್ರಹಿಸಿ ನವಜೀವನ ಟ್ರಸ್ಟಿನ ಮೂಲಕ 'ಅರ್ಜುನವಾಣಿ' ಎಂಬ ಹೆಸರಿನಲ್ಲಿ 1925ರಲ್ಲಿ ಪ್ರಕಟಿಸಿದರು. ಮರು ವರ್ಷ ಅವರು ಸತ್ಯಾಗ್ರಹ ಆಶ್ರಮದ ಕಾರ್ಯ ನಿರ್ವಾಹಕ ಸಮಿತಿಯ

ಅಧ್ಯಕ್ಷರಾದರು. ಅದೇ ವರ್ಷ ಗುಜರಾತಿ ಸಾಹಿತ್ಯ ಪರಿಷತ್ತಿನ ಪ್ರಶಸ್ತಿಯನ್ನು ಪಡೆದರು. ನಂತರ ಸರ್ದಾರ್ ಪಟೇಲ್ ಅವರೊಂದಿಗೆ ಬಾರ್ಡೋಲಿ ಸತ್ಯಾಗ್ರಹದಲ್ಲಿ ಭಾಗವಹಿಸಿ ಗುಜರಾತಿನಲ್ಲಿ ಸತ್ಯಾಗ್ರಹ ಇತಿಹಾಸವನ್ನು ಬರೆದು ಅದನ್ನೇ ಇಂಗ್ಲಿಷ್‌ಗೆ 'ದಿ ಸ್ಟೋರಿ ಆಫ್ ಬಾರ್ಡೋಲಿ' ಎಂದು ಭಾಷಾಂತರಿಸಿದರು. 1926ರ ವೇಳೆಗೆ ಮಹದೇವದೇಸಾಯಿ ಅವರನ್ನು ಆಶ್ರಮದ ಕಾರ್ಯಕರ್ತರು ಸತ್ಯಾಗ್ರಹ ಸಮಿತಿ ಅಧ್ಯಕ್ಷರನ್ನಾಗಿ ನೇಮಕ ಮಾಡಿದರು.

## ಬೆಂಗಳೂರಿನಲ್ಲಿ

1927ರ ಏಪ್ರಿಲ್ 21ರಿಂದ ಜೂನ್ ಐದರವರೆಗೆ (45 ದಿವಸ) ನಂದಿಬೆಟ್ಟದಲ್ಲಿ ವಿಶ್ರಾಂತಿ ಪಡೆದ ಗಾಂಧೀಜಿ ಜೂನ್ ಐದರಿಂದ ಆಗಸ್ಟ್ 30ರವರೆಗೆ (87ದಿವಸ) ಬೆಂಗಳೂರಿನ ಕುಮಾರ ಕೃಪದಲ್ಲಿ ತಂಗಿದ್ದರು. ಮಹದೇವದೇಸಾಯಿ ಗಾಂಧಿ ಅವರ ಜೊತೆಯಲ್ಲಿಯೇ ಇದ್ದರು. ಆಗ ಕನ್ನಡಿಗರಿಗೆ ಮಹದೇವದೇಸಾಯಿಯ ಪರಿಚಯವಾಯಿತು. ಕುಮಾರ ಕೃಪದಲ್ಲಿ ಗಾಂಧೀಜಿ ಸಂಗಡಿಗರೆಲ್ಲರೂ ತಮ್ಮ ತಮ್ಮ ಬಟ್ಟೆಗಳನ್ನು ತಾವೇ ಒಗೆದುಕೊಳ್ಳಬೇಕಾಗಿತ್ತು. ಕೆಲ ದಿವಸಗಳ ನಂತರ ಎಲ್ಲರೂ ಬಟ್ಟೆಗಳನ್ನು ಅಗಸನಿಗೆ ಕೊಟ್ಟರು. ಅದು ಹೇಗೋ ಗಾಂಧೀಜಿಗೆ ತಿಳಿಯಿತು. ಆಗ ಮಹದೇವದೇಸಾಯಿಯನ್ನು ಗಾಂಧೀಜಿ ಕರೆದು "ನೋಡು, ಇದೇಕೆ ಇಷ್ಟು ಬಟ್ಟೆಗಳನ್ನು ಅಗಸನಿಗೆ ಹಾಕುವುದು?ಇದಕ್ಕೆ ಹಣ ಎಲ್ಲಿಂದ ಬರಬೇಕು?ನೀವು ಈಗ ಅಗಸನಿಗೆ ಕೊಡುತ್ತಿರುವ ಹಣ ಸಾರ್ವಜನಿಕರ ಹಣ, ನಾವು ಜನತೆಯ ಸೇವಕರು. ಆದರೆ ನಮ್ಮ ಖರ್ಚು–ವೆಚ್ಚ ನೋಡಿದರೆ ನಾವು ಅದನ್ನು ಮರೆತು, ನಾವು ಸೇವಕರಲ್ಲ, ರಾಜರು ಎನ್ನುವಂತೆ ಖರ್ಚು ಮಾಡುತ್ತಿದ್ದೇವೆ ಎನಿಸುತ್ತಿದೆ" ಎಂದರು ಅಸಮಾಧಾನದಿಂದ.

ಆಗ ಮಹದೇವದೇಸಾಯಿ "ಇಲ್ಲಿಯ ಅಗಸನಿಗೆ ಕೊಡುವ ಹಣ ಹೆಚ್ಚಲ್ಲ, ನಾವೇ ಒಗೆದುಕೊಂಡರೂ ಅಷ್ಟೇ ಹಣ ಖರ್ಚಾಗುತ್ತದೆ" ಎಂದರು.

ಅದಕ್ಕೆ ತಕ್ಷಣ ಗಾಂಧೀಜಿ ಅವರವರ ಬಟ್ಟೆಗಳನ್ನು ಒಗೆದುಕೊಂಡರೆ ವ್ಯರ್ಥವಾಗಿ ಖರ್ಚಾಗುವ ಹಣ ಸ್ವಲ್ಪವಾದರೂ ಉಳಿಯುತ್ತದೆ" ಎಂದರು. ಅದಕ್ಕೆ ಮಹದೇವದೇಸಾಯಿ "ಬಾಪು ಈಗ ನಾನು ಪ್ರತಿನಿತ್ಯ ಬೆಳಗಿನ ಜಾವ ಮೂರು ಗಂಟೆಗೆ ಏಳುತ್ತಿದ್ದೇನೆ, ನನ್ನ ಬಟ್ಟೆ ಒಗೆದುಕೊಳ್ಳಲು ಹೊತ್ತೆಲ್ಲಿದೆ?" ಎಂದರು. ಅದಕ್ಕೆ ಗಾಂಧೀಜಿ "ಹೌದೇನು? ಹಾಗಾದರೆ ನಾಳೆಯಿಂದ ಎರಡು ಗಂಟೆಗೆ ಏಳು; ಬೇರೆಯವರೂ ಅವರವರ ಬಟ್ಟೆಗಳನ್ನು ಅವರವರೇ ಒಗೆದುಕೊಳ್ಳಬೇಕೆಂದು ಹೇಳು; ಎಲ್ಲ ಸರಿಹೋಗುತ್ತದೆ" ಎಂದರು. ಮಹದೇವ ಮರು ಮಾತಾಡಲಿಲ್ಲ.

ಅಂದಿನಿಂದ ಮಹದೇವ ಪ್ರತಿದಿನ ಎರಡು ಗಂಟೆಗೆ ಎದ್ದು ತನ್ನ ಬಟ್ಟೆಗಳನ್ನು ಒಗೆಯಲು ಪ್ರಾರಂಭಿಸಿದರು. ಆದರೆ ಗಾಂಧೀ ಅವರ ಬಟ್ಟೆಗಳನ್ನು ಕಸ್ತೂರ ಬಾ ಅವರೇ ಒಗೆಯುತ್ತಿದ್ದರು. ಆದರೆ ಎಂದಿನಿಂದ ಗಾಂಧೀಜಿ ಮಹದೇವದೇಸಾಯಿಗೆ ಎರಡು ಗಂಟೆಗೆ ಏಳಬೇಕೆಂದು ಆಜ್ಞೆ ಮಾಡಿದರೋ, ಅಂದಿನಿಂದ ಗಾಂಧೀಜಿ ತಮ್ಮ ಟವಲನ್ನು ತಾವೇ ಒಗೆದುಕೊಳ್ಳಲು ಪ್ರಾರಂಭಿಸಿದರು. ಅದುವರೆವಿಗೂ ಆ ಟವಲನ್ನು ಮಹದೇವದೇಸಾಯಿಯೇ ಒಗೆಯುತ್ತಿದ್ದರು.

ಮಹದೇವದೇಸಾಯಿ, ಗಾಂಧೀಜಿ ಅವರನ್ನು ಪರಮಪೂಜ್ಯ ಗುರುವಿನ ಸ್ಥಾನದಲ್ಲಿಟ್ಟು ಅವರ ಒಂದೊಂದು ಮಾತನ್ನು ವೇದವಾಕ್ಯ ಎನ್ನುವಂತೆ ಗೌರವಿಸುತ್ತಿದ್ದರೋ, ಅಷ್ಟೇ ಪ್ರೇಮ, ಕಾಳಜಿ ಗಾಂಧೀಜಿಗೆ ಮಹದೇವದೇಸಾಯಿ ಅವರ ಮೇಲಿತ್ತು.

ಕುಮಾರ ಕೃಪದಲ್ಲಿದ್ದಾಗ ಗಾಂಧೀಜಿ ಕ್ಷೌರ ಮಾಡಿಸಿಕೊಳ್ಳಬೇಕಾಗಿತ್ತು. ಆ ಕಾರಣದಿಂದಾಗಿ ಮಹದೇವದೇಸಾಯಿ, ಕ್ಷೌರಿಕನನ್ನು ಕರೆ ತರುವಂತೆ ಒಬ್ಬ ಸ್ವಯಂ ಸೇವಕನಿಗೆ ತಿಳಿಸಿದರು. ದೂರದಿಂದ ಕ್ಷೌರಿಕನನ್ನು ಕರೆತರಲು ತುಂಬ ತಡವಾಯಿತು. ಅಷ್ಟರಲ್ಲಿ ಗಾಂಧೀಜಿ ಸಮಯಕ್ಕೆ ಸರಿಯಾಗಿ ಹೋಗಬೇಕಾಗಿದ್ದುದರಿಂದ ಬಿಡಾರದಿಂದ ಹೊರಕ್ಕೆ ಹೊರಟು ಹೋಗಿದ್ದರು. ಬಂದ ಕ್ಷೌರಿಕ ಮಹದೇವದೇಸಾಯಿಯನ್ನು ಕಂಡು ಇವರೇ ಗಾಂಧೀಜಿ

ಇರಬಹುದೆಂದು ಕ್ಷೌರ ಮಾಡಲು ಅಣಿಮಾಡಿಕೊಂಡ. 'ಗಾಂಧೀಜಿ ಹೊರಕ್ಕೆ ಹೋಗಿದ್ದಾರೆ' ಎಂದು ತಿಳಿಸಿದ ಮಹದೇವದೇಸಾಯಿ ಕ್ಷೌರಿಕನ ಸಮಾಧಾನಕ್ಕಾಗಿ ತಾವೇ ಕ್ಷೌರ ಮಾಡಿಸಿಕೊಂಡರು.

ಗಾಂಧಿ ಅವರ ಜೊತೆ ಜಮ್ನಾಲಾಲ್ ಬಜಾಜ್, ಕಸ್ತೂರ ಬಾ, ಮಹದೇವ ದೇಸಾಯಿ. ಗಂಗಾಧರರಾವ್ ದೇಶಪಾಂಡೆ, ರಾಜಾಜಿ ಮುಂತಾದವರಿದ್ದರು. ಆ ಸಮಯದಲ್ಲಿ ತಿರುಮಲೆ ತಾತಾಚಾರ್ಯ ಶರ್ಮರ ಪತ್ನಿ ರಾಜಮ್ಮ(ಭಾರತಿ) ವೀಣೆ ನುಡಿಸುವುದರಲ್ಲಿ ಬಹು ಪ್ರಸಿದ್ಧಿ ಹೊಂದಿದ್ದರು. ಆಕೆಯ ಪರಿಚಯ ಗಾಂಧಿ ಅವರಿಗೆ ಮೊದಲೇ ಆಗಿತ್ತು. ಒಂದು ದಿನ ಗಾಂಧಿ ಜೊತೆಯಲ್ಲಿದ್ದವರೆಲ್ಲರೂ ಮಹದೇವದೇಸಾಯಿಯೂ ಸೇರಿದಂತೆ ರಾಜಮ್ಮನವರ ವೀಣಾವಾದನವನ್ನು ಕೇಳಲು ವಿಶ್ವೇಶ್ವರಪುರದಲ್ಲಿನ ತೀ. ತಾ. ಶರ್ಮ ಅವರ ಮನೆಗೆ ಬಂದರು. ಗಾಂಧೀಜಿ ಮಾತ್ರ ಬಂದಿರಲಿಲ್ಲ. ಈ ವಿಷಯ ಗಾಂಧೀಜಿಗೆ ತಿಳಿದು ರಾಜಮ್ಮ ಅವರನ್ನು ಕುಮಾರಕೃಪಾಗೆ ಕರೆಸಿಕೊಂಡು ಅವರಿಗೆ ಇಷ್ಟವಾದ 'ವೈಷ್ಣವ ಜನತೋ'ಕನ್ನಡ ಹಾಡನ್ನು ಪ್ರಾರ್ಥನಾ ಸಭೆಯಲ್ಲಿ ಕೇಳಿ ಸಂತೋಷಪಟ್ಟರು. ರಾಜಮ್ಮನವರಿಗೆ ಹಿಂದಿ ಬರುತ್ತಿರಲಿಲ್ಲ. ಆ ಹಾಡನ್ನು ಕನ್ನಡದಲ್ಲಿ ಸಿದ್ಧಪಡಿಸಿದವರು ಮಹದೇವದೇಸಾಯಿ, ರಾಜಾಜಿ ಮತ್ತು ಗಂಗಾಧರರಾವ್ ದೇಶಪಾಂಡೆ.

ಆಗ ಮಾವಿನ ಹಣ್ಣಿನ ಕಾಲ. ರಾಜಾಜಿಯವರಿಗೆ ಮಾವಿನ ಹಣ್ಣೆಂದರೆ ಇಷ್ಟ. 'ಬಿಡಾರದಲ್ಲಿ ಮಾವಿನ ಹಣ್ಣು ಇಲ್ಲವೇ?'ಎಂದು ಕೇಳಿದರು. ತಕ್ಷಣ ಮಾವಿನ ಹಣ್ಣು ಬಂತು. ಎಲ್ಲರೂ ತಿಂದರು. ಮಹದೇವದೇಸಾಯಿ ಕಸ್ತೂರಬಾ ಅವರಿಗೆ ಮಾವಿನ ಹಣ್ಣು ತಿನ್ನುವಂತೆ ಒತ್ತಾಯ ಮಾಡಿದರು. ಆಗ ಬಾ ಅವರು ತಮ್ಮದೇ ಆದ ಹರುಕು-ಮುರುಕು ಇಂಗ್ಲಿಷಿನಲ್ಲಿ 'ಇನ್ ಮಾರ್ನಿಂಗ್ ಐ ಈಟ್ ಮ್ಯಾಂಗೋ ಅಂಡ್ ಆಲ್ ಡೇ ಇಟ್ ಈಸ್ ಮ್ಯಾಂಗೋ' ಬೆಳಗ್ಗೆ ತಿಂದ ಒಂದು ಮಾವಿನ ಹಣ್ಣು ಇನ್ನೂ ಎದೆಯಲ್ಲಿ ಒತ್ತುತ್ತಿದೆ ಎಂದು ತಮ್ಮ ಕೈಯನ್ನು ಗಂಟಲಿನಿಂದ ಎದೆಯವರೆಗೆ ಸವರಿಕೊಳ್ಳುತ್ತಾ ಹೇಳಿದರು. ಎಲ್ಲರೂ ಬಿದ್ದುಬಿದ್ದು ನಕ್ಕರು.

ಕುಮಾರ ಕೃಪಾದಲ್ಲಿ ರಾತ್ರಿ ಒಂಬತ್ತು ಗಂಟೆಗೆ ಎಲ್ಲರೂ ಮಲಗಿದರೆ ಮೀರಾ ಬಹೆನ್ ಗಾಂಧೀಜಿ ಅವರ ದೇಹಕ್ಕೆ ಎಣ್ಣೆ ಸವರುತ್ತಾ ಹಲವು ವಿಷಯಗಳ ಬಗ್ಗೆ ಚರ್ಚಿಸುತ್ತಿದ್ದರು. ಮಹದೇವದೇಸಾಯಿ ಮಾತ್ರ ಅವರ ಕೋಣೆಯಲ್ಲಿ ಹತ್ತು ಗಂಟೆ ನಂತರವೂ ಪತ್ರ ವ್ಯವಹಾರಗಳಲ್ಲಿ ಮಗ್ನರಾಗಿರುತ್ತಿದ್ದರು. ಯಾವಾಗ ಮಲಗುತ್ತಿದ್ದರೋ! ಯಾವಾಗ ಏಳುತ್ತಿದ್ದರೋ! ಆ ದೇವರಿಗೇ ಗೊತ್ತು. ಮಲಗುವ ಮುನ್ನವೇ ಏಳುವ ಚಿಂತೆ.

ಮಹದೇವದೇಸಾಯಿ ಅವರು ಅದೇ ವರ್ಷ ಗಾಂಧೀಜಿ ಅವರು ಗುಜರಾತಿ ಭಾಷೆಯಲ್ಲಿ ಬರೆದ ತಮ್ಮ 'ಆತ್ಮಕಥೆ ಅಥವಾ ನನ್ನ ಸತ್ಯಾನ್ವೇಷಣೆ'ಯ ಇಂಗ್ಲಿಷ್ ಅನುವಾದವನ್ನು ಮಾಡಿದರು. ಆ ಮೋಹಕ ಭಾಷೆ ಗಾಂಧೀಜಿಯನ್ನು ಬೆರಗುಗೊಳಿಸಿತು. 1928ರಲ್ಲಿ ಸರ್ದಾರ್ ವಲ್ಲಭಭಾಯಿ ಪಟೇಲರ ಜೊತೆಗೂಡಿ ಬಾರ್ಡೋಲಿ ಸತ್ಯಾಗ್ರಹದಲ್ಲಿ ಪಾಲ್ಗೊಂಡರು. 1929ರ ಮಾರ್ಚ್‌ನಲ್ಲಿ ಗಾಂಧೀಜಿ ಜೊತೆಯಲ್ಲಿ ಬರ್ಮಾ ಪ್ರವಾಸ ಕೈಗೊಂಡರು. 1930ರ ಉಪ್ಪಿನ ಸತ್ಯಾಗ್ರಹದಲ್ಲಿ ಪಾಲ್ಗೊಂಡು ಸೆರೆಮನೆ ವಾಸ ಅನುಭವಿಸಿದರು.

## ದುಂಡು ಮೇಜಿನ ಪರಿಷತ್ತು

1931ರ ಡಿಸೆಂಬರ್‌ನಲ್ಲಿ ಭಾರತದ ಭವಿಷ್ಯವನ್ನು ಚರ್ಚೆ ಮಾಡಲು ಕರೆದಿದ್ದ ದುಂಡು ಮೇಜಿನ ಪರಿಷತ್ತಿಗಾಗಿ ಲಂಡನ್ನಿಗೆ ಗಾಂಧೀಜಿ ಹೊರಟರು. ಆ ಪ್ರವಾಸದಲ್ಲಿ ಮಹದೇವದೇಸಾಯಿ ನಿತ್ಯ ನಿರಂತರವಾಗಿ ಪಾಶ್ಚಾತ್ಯರ ಸಂಪರ್ಕ ಬೆಳೆಸಿದರು. ಫ್ರೆಂಚ್ ಸಾಹಿತಿ ರೊಮೆನ್ ರೋಲಾ, ಇಟಲಿಯ ಮುಸೋಲಿನಿಯ ಪುತ್ರಿ, ಬ್ರಿಟಿಷ್ ಪತ್ರಿಕೋದ್ಯಮಿಗಳು, ಪೋಲೀಸರು, ಎಲ್ಲರಿಗೂ ಮಹದೇವದೇಸಾಯಿ ಆತ್ಮೀಯ ಗೆಳೆಯರಾದರು. ಮತ್ತು ಪಾಶ್ಚಾತ್ಯ ರಾಷ್ಟ್ರಗಳ ವಿಚಾರವೇತ್ತರಿಗೆ ಗಾಂಧಿ ಮಾರ್ಗದ ಶ್ರೇಷ್ಠ ವ್ಯಾಖ್ಯಾನಕಾರರೆನಿಸಿಕೊಂಡರು.

ಸತ್ಯಾಗ್ರಹದ ಅಂಗವಾಗಿ 1932ರಲ್ಲಿ ದೇಸಾಯಿ ಅವರನ್ನು ಬಂಧಿಸಿ ಗಾಂಧೀಜಿ ಮತ್ತು ಸರ್ದಾರ್ ಪಟೇಲ್ ಅವರೊಂದಿಗೆ ಸೆರೆಮನೆಗೆ ಕಳುಹಿಸಲಾಯಿತು. 1933ರಲ್ಲಿ ಗಾಂಧೀಜಿ ಯರವಾಡ ಸೆರೆಮನೆಯಲ್ಲಿದ್ದಾಗ ಹರಿಜನರ ಸಮಸ್ಯೆ ಕುರಿತು ಉಪವಾಸ ಕೈಗೊಂಡರು. ಆಗ ಸೆರೆಮನೆಯಲ್ಲಿದ್ದ ಮಹದೇವದೇಸಾಯಿ ಅವರನ್ನು ಸರಕಾರದವರು ಬೆಳಗಾವಿಯ ಹಿಂಡಲಗಾ ಸೆರೆಮನೆಗೆ ಸ್ಥಳಾಂತರಿಸಿದರು. ಅಲ್ಲಿ 'ಬಿ' ಕ್ಲಾಸಿನ ಕೈದಿಗಳೊಡನೆ ಕೂಡಿಸದೆ ಬೇರೆ ವಾರ್ಡಿನಲ್ಲಿಟ್ಟು 'ಬಿ' ಕ್ಲಾಸಿನ ಒಬ್ಬ ಕೈದಿಯನ್ನು ಜೊತೆಯಲ್ಲಿರಿಸಿದರು. ಆಗ "ಗೀತಾ ಅಕಾರ್ಡಿಂಗ್ ಟು ಗಾಂಧಿ (ಗಾಂಧಿ ದೃಷ್ಟಿಯಲ್ಲಿ ಭಗವದ್ಗೀತೆ)" ಎಂಬ ಕೃತಿಯನ್ನು ಮಹದೇವದೇಸಾಯಿ ರಚಿಸಿದರು.

1934ರ ಜನವರಿ ಮೊದಲ ವಾರ ಮಹಾತ್ಮ ಗಾಂಧಿ ಸಂಗಡಿಗರೊಂದಿಗೆ ಹರಿಜನ ಕಲ್ಯಾಣ ನಿಧಿಗಾಗಿ ಪ್ರವಾಸ ಮಾಡುತ್ತಾ ಬೆಂಗಳೂರಿಗೆ ಆಗಮಿಸಿದ್ದರು. ಆಗ ಮಹದೇವದೇಸಾಯಿ ಮತ್ತು ಕಸ್ತೂರಬಾ ಬಂದಿರಲಿಲ್ಲ. ಆ ಸಮಯದಲ್ಲಿ ಅವರು ಯರವಾಡ ಸೆರೆಮನೆಯಲ್ಲಿದ್ದರು. ಗಾಂಧೀಜಿ ತಮ್ಮ ನಿಕಟವರ್ತಿಗಳೊಂದಿಗೆ 1927ರಲ್ಲಿ ಇದೇ ಕುಮಾರ ಕೃಪದಲ್ಲಿ ಮೂರು ತಿಂಗಳು ಇದ್ದುದನ್ನು ಮತ್ತೆ ಮತ್ತೆ ನೆನೆಸಿಕೊಂಡರು. ಆಗ ಮಹದೇವದೇಸಾಯಿ ಇರುತ್ತಿದ್ದ ಕೊಠಡಿಯನ್ನು ನೋಡಿ ಗಾಂಧೀಜಿ 'ಮಹದೇವ ಜೊತೆಯಲ್ಲಿ ಇಲ್ಲದೆ ಇರುವುದು ಇದು ಮೊದಲನೆಯ ಸಲ' ಎಂದು ಹೇಳುತ್ತಾ ನಿಟ್ಟುಸಿರರಿಟ್ಟರು. ಅವರ ಸ್ಥಾನಕ್ಕೆ ಮತ್ತೆ ಯಾರೂ ಬರಲು ಸಾಧ್ಯವಿಲ್ಲ ಎಂದು ಎಲ್ಲರಿಗೂ ಗೊತ್ತಿತ್ತು. ಮಹದೇವದೇಸಾಯಿಯನ್ನು ಕಂಡವರೆಲ್ಲರೂ ಪ್ರೀತಿಸುತ್ತಿದ್ದರು. ಅವರ ಮಧುರ ಮಂದಹಾಸವು ಹತ್ತಿರ ಬಂದವರ ಹೃದಯದಲ್ಲಿ ಮನೆಮಾಡುತ್ತಿತ್ತು. ಎಲ್ಲರೂ 'ಮಹದೇವದೇಸಾಯಿ ಸೆರೆಮನೆಯನ್ನು ಬಿಟ್ಟು ಯಾವಾಗ ಬರುತ್ತಾರೆ' ಎಂದು ಕೇಳುತ್ತಿದ್ದರು

# ಸಬರಮತಿಯಿಂದ ವಾರ್ಧಾಗೆ

1934ರ ಆಗಸ್ಟ್‌ನಲ್ಲಿ ಗಾಂಧೀಜಿ ಸಬರಮತಿ ಆಶ್ರಮವನ್ನು ತ್ಯಜಿಸಿ ಸ್ವರಾಜ್ಯ ಸಿಗುವುವವರೆಗೆ ಅಲ್ಲಿ ಕಾಲಿಡನೆಂದು ಶಪಥ ತೊಟ್ಟು ಶುದ್ಧ ಗ್ರಾಮ್ಯ ಜೀವನವನ್ನು ಅಳವಡಿಸಿಕೊಳ್ಳಲು ನಿಶ್ಚಯಿಸಿ ಮಹಾರಾಷ್ಟ್ರದಲ್ಲಿನ ನಾಗಪುರದ ಬಳಿಯ ವಾರ್ಧಾ ನಗರಕ್ಕೆ ಬಂದರು. ನಂತರ 1936ರ ಏಪ್ರಿಲ್‌ನಲ್ಲಿ ವಾರ್ಧಾ ನಗರವನ್ನೂ ತೊರೆದು ಅಲ್ಲಿಂದ ನಾಲ್ಕು ಮೈಲಿ ದೂರದಲ್ಲಿ ಸೇಗಾಂವ್ ಎಂಬ 639 ಜನಸಂಖ್ಯೆ(ಇವರಲ್ಲಿ ಹೆಚ್ಚಿಗೆ ಅಸ್ಪೃಶ್ಯರು)ಇದ್ದ ಹಳ್ಳಿ ಬಳಿಯಲ್ಲಿನ ಹೊಲದಲ್ಲಿ ಗುಡಿಸಲು ಕಟ್ಟಿಕೊಂಡು ಇರಲು ತೆರಳಿದರು[4]. ಯಾವ ಸೌಲಭ್ಯವೂ ಇರದ ಸ್ಥಳದಲ್ಲಿ ವಸತಿ ಕಲ್ಪಿಸಿಕೊಟ್ಟಿದ್ದು ಜಮನಾಲಾಲ್ ಬಜಾಜರು. (ಇಂದು ಅದೇ ಹಳ್ಳಿ ಸೇವಾಗ್ರಾಮ ಎಂದು ವಿಶ್ವದಲ್ಲಿ ಹೆಸರುವಾಸಿಯಾಗಿದೆ)[5]. ಗಾಂಧೀಜಿ ಅಲ್ಲಿ ತಮ್ಮ ಪರ್ಣಕುಟಿಯಲ್ಲಿ ನೆಲಸಿದ ಮೇಲೆ ಆ ಮಣ್ಣಿನ ರಸ್ತೆಗೆ ಸ್ವಲ್ಪ ಪ್ರಾಣ ಬಂತು. ಮಹದೇವದೇಸಾಯಿ ಕೂಡ ಗಾಂಧೀಜಿ ಜೊತೆ ಸೇವಾಗ್ರಾಮಕ್ಕೆ ಹೊರಡಬೇಕಾಗಿತ್ತು. ಆದರೆ ದೇಶದ ಅನೇಕ ಸಮಸ್ಯೆಗಳನ್ನು ಪರಿಹರಿಸುವುದು, ಆಂದೋಳನ ಏರ್ಪಡಿಸುವುದು ಅವಶ್ಯಕ ಕಾರ್ಯಗಳಾಗಿದ್ದವು. ಅದಕ್ಕಾಗಿ ಅಂಚೆ, ತಾರು, ರೈಲುಗಳ ಅನುಕೂಲ ಅವಶ್ಯಕವಾಗಿದ್ದರಿಂದ ಗಾಂಧೀಜಿಯಿಂದ ಬೇರೆಯಾಗಿ ಮಹದೇವದೇಸಾಯಿ ವಾರ್ಧಾ ನಗರದ ಮಗನವಾಡಿಯಲ್ಲಿದ್ದರು ಮತ್ತು ಪ್ರತಿದಿನ ಅಂಚೆ-ತಂತಿ ಸಂದೇಶಗಳು, ಪತ್ರ ಮುಂತಾದವನ್ನು ಸಂಗ್ರಹಿಸಿ 11-12ಗಂಟೆ ವೇಳೆಯಲ್ಲಿ ಪ್ರಖರವಾದ ಬಿಸಿಲಿನಲ್ಲಿ ಕಾಲ್ನಡಿಗೆಯಲ್ಲಿ ಗಾಂಧೀಜಿ ಬಳಿಗೆ ಸೇವಾಗ್ರಾಮಕ್ಕೆ ಹೋಗುತ್ತಿದ್ದರು ಮತ್ತು ಎರಡು ಮೂರು ಗಂಟೆಗಳ ನಂತರ ಒಂದು ಹೊರೆ ಕೆಲಸವನ್ನು ಹೊತ್ತು ವಾರ್ಧಾಗೆ ಹಿಂದಿರುಗುತ್ತಿದ್ದರು.

ಒಂದು ಬಾರಿ ಹೀಗೆ ನಿಯಮಿತವಾಗಿ ಎಂಟು ಮೈಲಿ ನಡೆಯುತ್ತಿದ್ದರೂ, ಕೆಲವು ಸಾರಿ ಮಹತ್ವದ ಕೆಲಸಗಳು ಎದುರಾದಾಗ ದಿವಸಕ್ಕೆ ಎರಡು ಸಾರಿ ಸೇವಾಗ್ರಾಮಕ್ಕೆ ಹೋಗಿ ಬರುತ್ತಿದ್ದರು. ಅದು ಒಟ್ಟು 16 ಮೈಲಿ ಆಗುತ್ತಿತ್ತು. ಆ ಕ್ರಮ ಎರಡು ವರ್ಷ ಕಾಲ ಪೂರ್ತಿ ನಡೆಯಿತು. ಆ ಉರಿ ಬಿಸಿಲಿನಲ್ಲಿ

ಓಡಾಡಿದ್ದರಿಂದ ಮಹದೇವದೇಸಾಯಿ ಅನಾರೋಗ್ಯಕ್ಕೊಳಗಾದರು. ಸೇವಾಗ್ರಾಮದಲ್ಲಿ ಅಂಚೆ ಕಚೇರಿ ತೆರೆದನಂತರ ಮಹದೇವದೇಸಾಯಿ ವಾರ್ಧಾದಿಂದ ಸೇವಾಗ್ರಾಮಕ್ಕೆ ಹೋದರು.

## ದಾಂಪತ್ಯ

ಮಹದೇವದೇಸಾಯಿ ತುಂಬು ಪ್ರೇಮದ ಸಂಸಾರಿ. ಉದಾರ ಚರಿತ ದುರ್ಗಾಬಹೆನ್‌ರೊಡನೆ ಅವರ ದಾಂಪತ್ಯ ಹಾಲುಸಕ್ಕರೆ ಬೆರೆತಂತಿತ್ತು. ಒಬ್ಬನೇ ಮಗ ನಾರಾಯಣ ದೇಸಾಯಿ ಬಾಲ್ಯದಿಂದಲೂ ಆಶ್ರಮ ನಿಯಮಗಳಿಗೆ ಒಗ್ಗಿಹೋಗಿದ್ದ. ರಾಷ್ಟ್ರದ ನಾಯಕರು ಅವರ ಮನೆಗೆ ಬರುತ್ತಿದ್ದರು. ದೇಶದ ಸ್ಥಿತಿ, ಭವಿಷ್ಯ, ಮನುಷ್ಯ ಹೇಗೆ ಬದುಕಬೇಕೆಂಬ ವಿಷಯಗಳು ಚರ್ಚೆಯಾಗುತ್ತಿದ್ದವು. ಶ್ರೀಮಂತ ಬಿರ್ಲಾ, ಕವೀಂದ್ರ ರವೀಂದ್ರರು, ದೀನಬಂಧು ಆಂಡ್ರೂಸ್, ಠಕ್ಕರ್ ಬಾಪಾ ಇಂಥ ಪ್ರಖರ ಸಂತರೊಂದಿಗೆ ಮಹದೇವದೇಸಾಯಿಗೆ ನಿಕಟ ಸ್ನೇಹ ಬೆಳೆಯ ತೊಡಗಿತು. ಬ್ರಿಟಿಷ್ ಉನ್ನತಾಧಿಕಾರಿಗಳಿಗೆ ಮಹದೇವದೇಸಾಯಿ ಸನ್ಮಿತ್ರರಾದರು. ಗಾಂಧಿಯೊಡನೆ ವಿವಾದಕ್ಕೆ ನಿಂತವರೂ ಕೂಡ ಮಹದೇವದೇಸಾಯಿಯೊಡನೆ ನಮ್ರರಾಗಿ ಬಿಡುತ್ತಿದ್ದರು. ಸೌಮ್ಯತೆಯಲ್ಲಿ, ವಿವೇಕಪೂರ್ಣ ವ್ಯಕ್ತಿತ್ವದಲ್ಲಿ, ಆ ಮುಗಳ್ನಗೆಯ ಮೋಡಿಯಲ್ಲಿ ಅನೇಕ ಸಮಸ್ಯೆಗಳಿಗೆ ಉತ್ತರ ದೊರಕುತ್ತಿತ್ತು

## ಶಾಂತಿನಿಕೇತನಕ್ಕೆ ಹಣದ ಅವಶ್ಯಕತೆ

1936ರ ಸಮಯದಲ್ಲಿ ರವೀಂದ್ರನಾಥ ಠಾಗೂರರ ಶಾಂತಿನಿಕೇತನಕ್ಕೆ ಹಣದ ಕೊರತೆಯುಂಟಾಯಿತು. ಆಗ ಠಾಗೂರರು ತಮ್ಮ "ಚಿತ್ರಾಂಗದಾ ನೃತ್ಯ ನಾಟಕವನ್ನು" ಶಿಷ್ಯರೊಂದಿಗೆ ಕೂಡಿ ಪ್ರದರ್ಶನಕ್ಕೆ ಏರ್ಪಾಟು ಮಾಡಿದ್ದರು. ಸುಪ್ರಸಿದ್ಧ ಹೊಂದಿದ್ದ ಈ ನಾಟಕವನ್ನು ದೇಶದ ಇತರ ಕಡೆಗಳಲ್ಲಿ ಟಿಕೆಟ್ ಮೂಲಕ ಪ್ರದರ್ಶಿಸಿ ಹಣ ಸಂಗ್ರಹಿಸಲು ಪ್ರಾರಂಭಿಸಿದರು. ಹೀಗೆ ನಾನಾ

ಕಡೆ ನಾಟಕಗಳನ್ನಾಡುತ್ತಾ 1936ರ ಮಾರ್ಚ್‌ನಲ್ಲಿ ದೆಹಲಿಯಲ್ಲಿ ಪ್ರದರ್ಶನ ಏರ್ಪಾಟಾಯಿತು. ಅದೇ ಸಮಯದಲ್ಲಿ ಗಾಂಧೀಜಿ ದೆಹಲಿಯಲ್ಲಿದ್ದರು. ಚಿತ್ರಾಂಗದಾ ನಾಟಕದಲ್ಲಿ ಗುರುದೇವರು ನೃತ್ಯದ ಪಾತ್ರ ವಹಿಸುತ್ತಿದ್ದರು. ಆಗ ಗುರುದೇವರಿಗೆ 75 ವರ್ಷ ವಯಸ್ಸು. ಗುರುದೇವರಂತಹ ಮಹಾನ್ ವಿಭೂತಿ ಪುರುಷ ಕಷ್ಟಪಡುತ್ತಿದ್ದುದನ್ನು ಕಂಡ ಗಾಂಧೀಜಿ ಬಹಳ ತಳಮಳಗೊಂಡು ಚಿಂತಿಸತೊಡಗಿದರು. ಮಹದೇವದೇಸಾಯಿ ಅವರು ಘನ ಶ್ಯಾಮದಾಸ ಬಿರ್ಲಾ ಜೊತೆ ಮಾತನಾಡಿ ಆರು ಸಾವಿರ ರೂಪಾಯಿ ಗುರುದೇವರ ಕೈಗೆ ಸೇರುವಂತೆ ಏರ್ಪಾಡು ಮಾಡಿದರು. ಗುರುದೇವರು ಆ ಹಣದೊಂದಿಗೆ ನಾಟಕಗಳನ್ನಾಡುವುದನ್ನು ಅಲ್ಲಿಗೇ ನಿಲ್ಲಿಸಿ ಶಾಂತಿನಿಕೇತನಕ್ಕೆ ಹಿಂತಿರುಗಿದರು. ಇಂತಹ ಎಷ್ಟೋ ಕೆಲಸಗಳನ್ನು ಮಹದೇವದೇಸಾಯಿ ಸಹಜವಾಗಿ ಬಹು ಚತುರತೆಯಿಂದ ಮಾಡುತ್ತಿದ್ದರು[6].

ಗಾಂಧೀಜಿ 1936ರ ಏಪ್ರಿಲ್‌ನಲ್ಲಿ ನಾಗಪುರದ ಆಜುಬಾಜಿನ ಪ್ರದೇಶದಲ್ಲಿ ಅಸ್ಪೃಶ್ಯತಾ ನಿವಾರಣಾ ಆಂದೋಲನದಲ್ಲಿ ತೊಡಗಿಸಿಕೊಂಡಿದ್ದ ಸಂಧರ್ಭ. ಒಂದು ದಿನ ಗಾಂಧೀ ಅವರು ಕೈ ಒರೆಸಿಕೊಳ್ಳುವ ಕರವಸ್ತ್ರ, ಕೆಲಸ ಕಾರ್ಯಗಳ ಒತ್ತಡದಲ್ಲಿ ಎಲ್ಲೋ ಬಿಟ್ಟು ಬಂದಿದ್ದರು. ಬಹುಷಃ ಹಿಂದಿನ ದಿನ ಒಣಗಲು ಹಾಕಿದ್ದು ಅಲ್ಲೇ ಉಳಿದು ಹೋಗಿದ್ದಿರಲೂಬಹುದು.

ಗಾಂಧೀಜಿಗೆ ಆ ಕರವಸ್ತ್ರದ ಅವಶ್ಯಕತೆ ಬಿತ್ತು. ಅವರು ಮಹದೇವದೇಸಾಯಿಗೆ ಆ ಕರವಸ್ತ್ರವನ್ನು ತರಲು ಹೇಳಿದರು. 'ಹುಡುಕಿ ಈಗಲೇ ತರುತ್ತೇನೆ' ಎಂದು ಹೇಳಿ ಹೋದರು. ಕೊನೆಗೆ 'ಆ ಕರವಸ್ತ್ರ ಕಳೆದು ಹೋಗಿದೆ'ಎಂದು ಹೇಳಿಯೇ ಬಿಟ್ಟರು. 'ಅದು ಇನ್ನೂ ಎಷ್ಟು ಕಾಲ ಬಳಕೆಗೆ ಬರುವುದರಲ್ಲಿತ್ತು' ಎಂದು ಕೇಳಿದರು. 'ನಾಲ್ಕು ತಿಂಗಳು ಬಳಸಬಹುದಾಗಿತ್ತು'? ಎಂದು ಉತ್ತರಿಸಿದರು.

"ಹಾಗಿದ್ದರೆ ಇನ್ನು ನಾಲ್ಕು ತಿಂಗಳು ನಾನು ಯಾವ ಹೊಸ ಕರವಸ್ತ್ರವನ್ನೂ ಬಳಸದೆ ಕಾಲ ಕಳೆಯುತ್ತೇನೆ. ಮರೆವಿಗೆ ಇದೇ ಸೂಕ್ತವಾದ ಪ್ರಾಯಶ್ಚಿತ್ತ. ಆಮೇಲೆ ಇನ್ನೊಂದು ಕರವಸ್ತ್ರ ತೆಗೆದುಕೊಳ್ಳುತ್ತೇನೆ" ಎಂದು ಹೇಳಿ ತಾವೇ ಶಿಕ್ಷೆಯನ್ನು ವಿಧಿಸಿಕೊಂಡರು[7].

ಗಾಂಧೀಜಿ ಮಹದೇವದೇಸಾಯಿ ಮತ್ತಿತರ ಜೊತೆ ದಕ್ಷಿಣ ಭಾರತದಲ್ಲಿ ಹರಿಜನ ನಿಧಿ ಸಂಗ್ರಹ ಪ್ರವಾಸ ಮಾಡುತ್ತಾ 1936ರ ಮೇ 11ರಿಂದ 31ರವರೆಗೆ ನಂದಿ ಬೆಟ್ಟದಲ್ಲಿ ವಿಶ್ರಾಂತಿ ಪಡೆದು ನಂತರ ಜೂನ್ ಒಂದರಿಂದ 12ರವರೆಗೆ ಬೆಂಗಳೂರಿನಲ್ಲಿ ತಂಗಿದ್ದರು.

1937ರಲ್ಲಿ ರಾಜಕೀಯ ಕ್ಷೇತ್ರದಲ್ಲಿ ಪ್ರಾಂತೀಯ ಆಡಳಿತದ ಅವಕಾಶ ದೊರಕಿತ್ತು. ಪ್ರಾಂತಗಳಲ್ಲಿ ಕಾಂಗ್ರೆಸ್ ಸರಕಾರ ರಚಿತವಾಗಿತ್ತು. ಮಹದೇವದೇಸಾಯಿಗೂ ಕೂಡ ಮಹಾರಾಷ್ಟ್ರ ಮಂತ್ರಿಮಂಡಳದಲ್ಲಿ ಸೇರಿಕೊಳ್ಳಲು ಒತ್ತಾಯಪಡಿಸಿದ್ದರು. ಆದರೆ ಅವರ ಅಚಲವಾದ ಶ್ರದ್ಧೆ-ಭಕ್ತಿಗಳು ಗಾಂಧೀಜಿಯ ಚರಣಗಳಿಗೆ ಅರ್ಪಿತವಾಗಿದ್ದುವು. ಅವರಿಗೆ ಯಾವ ಅಧಿಕಾರದ ವ್ಯಾಮೋಹವೂ ಇರಲಿಲ್ಲ. ದೇಶದ ಎಲ್ಲಾ ಮೂಲೆಗಳಿಂದ ಕಾರ್ಯಕರ್ತರು, ಮಂತ್ರಿಗಳು ಮತ್ತು ವಿದೇಶಿ ಪತ್ರಕರ್ತರು ಅವರ ಮಾರ್ಗದರ್ಶನ ಪಡೆಯುವುದಕ್ಕಾಗಿ ಗಾಂಧೀಜಿಯನ್ನು ಭೇಟಿ ಮಾಡಲು, ಸೇವಾಗ್ರಾಮಕ್ಕೆ ನುಗ್ಗಿ ಬರುತ್ತಿದ್ದರು. ಗಾಂಧೀಜಿಯನ್ನು ಇಷ್ಟು ಹೆಚ್ಚಿನ ಹೊರೆಯಿಂದ ವಿಮುಕ್ತಗೊಳಿಸಲು ಮಹದೇವದೇಸಾಯಿ ಅವರನ್ನು ಭೇಟಿಮಾಡಿ ನೂರಕ್ಕೆ ಎಪ್ಪತ್ತೈದು ಭಾಗ ಕೆಲಸವನ್ನು ಮುಗಿಸಿಕೊಳ್ಳುತ್ತಿದ್ದರು. ಆಗ ಸೇವಾಗ್ರಾಮ ದೇಶದ ಕೇಂದ್ರ ಸ್ಥಳವಾಗಿತ್ತು. ಮಹದೇವದೇಸಾಯಿ ಅನೇಕ ಜಟಿಲವಾದ ಸಮಸ್ಯೆಗಳನ್ನು ಪರಿಹರಿಸುವುದರಲ್ಲಿ ನಿಪುಣರಾಗಿದ್ದರು[8].

## ಕಳುವಾದ ಹಣ

ಮಹದೇವದೇಸಾಯಿ ಅವರು ಎಷ್ಟು ಮೃದು ಹೃದಯವಂತರಾಗಿದ್ದರೋ ಅಷ್ಟೇ ಶುದ್ಧಚಾರಿತ್ರರೂ ಆಗಿದ್ದರು. ಒಮ್ಮೆ ಸ್ಟೇಷನ್‌ನಲ್ಲಿ ರೈಲ್ವೆ ಟಿಕೆಟ್ ಖರೀದಿಸುವಾಗ ಮಹದೇವದೇಸಾಯಿಯ ಜೇಬಿನಲ್ಲಿದ್ದ ನಾಲ್ಕು ನೂರು ರೂಪಾಯಿ ಕಳುವಾಯಿತು. ಮಹದೇವದೇಸಾಯಿಗೆ ಆಶ್ರಮದಿಂದ ತಿಂಗಳಿಗೆ 75 ರೂಪಾಯಿ ಬರುತ್ತಿತ್ತು. ತನ್ನ ಬೇಜವಾಬ್ದಾರಿಯಿಂದ ಆಶ್ರಮದ ಸಾರ್ವಜನಿಕ ಭಂಡಾರಕ್ಕೆ

ಈ ತೆರನಾದ ನಷ್ಟ ತಗುಲಿತೆಂದು ಬಹಳ ದುಃಖಿತರಾದರು. ಅದನ್ನು ಭರಿಸಲು ಬಹಳ ಹಿಂದೆಯೇ ಅನುವಾದ ಮಾಡಿದ್ದ 'ಆನ್ ಕಾಂಪ್ರೊಮೈಜ್' ಕೃತಿಗೆ ಪುರಸ್ಕಾರವಾಗಿ ಬಂದ ಒಂದು ಸಾವಿರ ರೂಪಾಯಿಯನ್ನು ಆಶ್ರಮದ ವ್ಯವಸ್ಥಾಪಕರ ಹೆಸರಿಗೆ ಕಳುಹಿಸುವುದರ ಜೊತೆಗೆ ಅದರಲ್ಲಿ ನಾಲ್ಕು ನೂರು ರೂಪಾಯಿ ಆಶ್ರಮ ಖಾತೆಯಲ್ಲಿ ಜಮಾ ಮಾಡಿಕೊಳ್ಳಲು ಹೇಳಿ ಮಿಕ್ಕ ಆರು ನೂರು ರೂಪಾಯಿಗಳನ್ನು ವಿದ್ಯಾರ್ಥಿಗಳಿಗೆ ಮೂರು ತಿಂಗಳ ವಿದ್ಯಾರ್ಥಿವೇತನ ನೀಡಲು ಕೊಡುವಂತೆ ಪತ್ರ ಬರೆದು ತಿಳಿಸಿದರು.

## ಹರಿಜನ ಬಾಲಕ ಚಕ್ರಯ್ಯ

ಸುಮಾರು **1937–38**ರಲ್ಲಿ ಮದರಾಸಿನಿಂದ ಚಕ್ರಯ್ಯ ಎಂಬ ಒಬ್ಬ ಹರಿಜನ ಬಾಲಕ ನೇಯ್ಗೆ ಕಲಿಯಲು ವಾರ್ಧಾಗೆ ಬರುವುದರಲ್ಲಿದ್ದ. ಆಗ ಗಾಂಧೀಜಿ ಮಹದೇವದೇಸಾಯಿಯನ್ನು ಕರೆದು "ನೋಡು ಮದರಾಸಿನ ಸೀತಾರಾಮ ಶಾಸ್ತ್ರಿಗಳಿಂದ ಪತ್ರ ಬಂದಿದೆ. ಅವರ ಆಶ್ರಮದ ಓರ್ವ ಹರಿಜನ ಬಾಲಕ ನಾಳೆ ಬೆಳಗ್ಗೆ ಮದರಾಸಿನಿಂದ ರೈಲಿನಲ್ಲಿ ಬರುವವನಿದ್ದಾನೆ. ನೀನು ಸ್ಟೇಷನ್‌ಗೆ ಹೋಗಿ ಆ ಬಾಲಕನನ್ನು ಕರೆದುಕೊಂಡು ಬಾ" ಎಂದು ಹೇಳಿದರು. ಮಹದೇವದೇಸಾಯಿ 'ಆಯಿತು' ಎಂದು ಹೇಳಿ ಹೋದರು.

ಮಾರನೆಯ ದಿವಸ ಬೆಳಗ್ಗೆ ಮದರಾಸಿನಿಂದ ಬರುವ ರೈಲಿನಲ್ಲಿ ಚಕ್ರಯ್ಯ ಬಂದು ವಾರ್ಧಾದಲ್ಲಿ ಇಳಿದ. ಅಲ್ಲಲ್ಲಿ ವಾರ್ಧಾ ಆಶ್ರಮದ ದಾರಿ ವಿಚಾರಿಸುತ್ತಾ ಕೊನೆಗೆ ಗಾಂಧಿ ಅವರ ಬಳಿಗೆ ಬಂದ. ಗಾಂಧೀಜಿಗೆ ನಮಸ್ಕರಿಸುತ್ತಾ 'ನಾನು ಬಂದಿದ್ದೇನೆ' ಎಂದು ಹೇಳಿದ. "ನಿನ್ನ ಹೆಸರು ಚಕ್ರಯ್ಯನೇ ಮಹದೇವದೇಸಾಯಿ ಸ್ಟೇಷನ್ ಹತ್ತಿರ ಬಂದಿರಲಿಲ್ಲವೇ?" ಎಂದು ಕೇಳಿದರು. 'ಇಲ್ಲ' ಎಂದು ಚಕ್ರಯ್ಯ ಉತ್ತರಿಸಿದ.

ಗಾಂಧೀಜಿ ಆತನನ್ನು 'ಮತ್ತೆ ನೀನು ಇಲ್ಲಿಗೆ ಹೇಗೆ ಬಂದೆ?'ಎಂದು ಕೇಳಿದರು. ಚಕ್ರಯ್ಯ "ಅಲ್ಲಿ ಇಲ್ಲಿ ದಾರಿ ಕೇಳಿಕೊಂಡು ಬಂದೆ" ಎಂದು ಹೇಳಿದ. ಆ ಮಾತು ಕೇಳಿ ಗಾಂಧೀಜಿ ಮಹದೇವದೇಸಾಯಿಯನ್ನು

ಕರೆಸಿ 'ನಿನಗೆ ಸ್ಟೇಷನ್‌ಗೆ ಹೋಗೋಕೆ ಆಗಲಿಲ್ವೆ?'ಎಂದು ಕೇಳಿದರು. ಮಹದೇವದೇಸಾಯಿ ನಮ್ರತೆಯಿಂದ 'ಬಾಪೂಜಿ ಮರೆತು ಬಿಟ್ಟೆ' ಎಂದು ಹೇಳಿದರು.

ಗಾಂಧೀಜಿ "ಇಂಥ ತಪ್ಪು ನಿನ್ನಿಂದ ಹೇಗಾಯಿತು? ಈ ಬಾಲಕ ಪ್ರದೇಶಕ್ಕೆ ಹೊಸಬ. ನಮ್ಮ ತಪ್ಪಿನಿಂದ ಈತ ಎಷ್ಟೊಂದು ತೊಂದರೆಗೆ ಸಿಕ್ಕಿಕೊಂಡನಲ್ಲಾ" ಎಂದು ಹೇಳಿದರು[9].

## ಒರಿಸ್ಸಾ ಪ್ರವಾಸ

ಪ್ರತಿ ವರ್ಷ ದೇಶದ ಬೇರೆ ಬೇರೆ ಪ್ರಾಂತ್ಯಗಳಲ್ಲಿ ನಡೆಯುತ್ತಿದ್ದ ಗಾಂಧಿ ಸೇವಾ ಸಂಘದ ವಾರ್ಷಿಕ ಅಧಿವೇಶನ ಒರಿಸ್ಸಾದ ಪುರಿ ಜಿಲ್ಲೆಯ ದೇಲಾಂಗ್‌ನಲ್ಲಿ 1938ರ ಮಾರ್ಚ್ 25ರಿಂದ 31ರವರೆಗೆ ನಡೆಯಿತು. ಆ ಅಧಿವೇಶನ ಪ್ರಸಿದ್ಧ ಯಾತ್ರಾಸ್ಥಳವಾದ ಪುರಿ ಜಗನ್ನಾಥನ ಬಳಿ ನಡೆದದ್ದರಿಂದ ಗಾಂಧಿ ಜೊತೆಯಲ್ಲಿ ಕಸ್ತೂರಿಬಾ, ಸೊಸೆ ಸುಶೀಲ(ಮಣಿಲಾಲ್ ಹೆಂಡತಿ), ಮಹದೇವದೇಸಾಯಿ, ಅವರ ಪತ್ನಿ ದುರ್ಗಾಬಹೆನ್, ಮಗ ನಾರಾಯಣ ದೇಸಾಯಿ, ಅವರ ಸೋದರತ್ತೆ ಲೀಲಾ ಹೋಗಿದ್ದರು. ಆ ಅಧಿವೇಶನದ ಅಂಗವಾಗಿ 'ಗ್ರಾಮೋದ್ಯೋಗ ಮತ್ತು ಅಭಿವೃದ್ಧಿಯ ವಸ್ತು ಪ್ರದರ್ಶನ'ವನ್ನು ಏರ್ಪಡಿಸಲಾಗಿತ್ತು. ಪ್ರದರ್ಶನವನ್ನು ಉದ್ಘಾಟಿಸಿ ಮಾಡಿದ ಭಾಷಣದಲ್ಲಿ ಗಾಂಧೀಜಿ "ಎಲ್ಲಿಯ ತನಕ ಪುರಿ ಜಗನ್ನಾಥ ದೇವಸ್ಥಾನಕ್ಕೆ ಹರಿಜನರನ್ನು ಬಿಡುವುದಿಲ್ಲವೋ ಅಲ್ಲಿನ ತನಕ ಅದನ್ನು ಜಗನ್ನಾಥನ ದೇವಾಸ್ಥಾನ ಎಂದು ಕರೆಯಲಾಗದು. ಅದನ್ನು ಪೂಜಾರಿಗಳ ಒಡೆತನದ ದೇವಸ್ಥಾನ ಎಂದಷ್ಟೇ ಕರೆಯಬಹುದು" ಎಂದರು. (ಹಿಂದೆ 1927ರ ಡಿಸೆಂಬರ್ 13ರಂದು ಜಗನ್ನಾಥ ಮಂದಿರಕ್ಕೆ ಹರಿಜನರೊಂದಿಗೆ ಪ್ರವೇಶ ಮಾಡಬೇಕೆಂದು ಹೋಗಿದ್ದ ಗಾಂಧಿಯನ್ನು ಒಳಗೆ ಬಿಡದೆ ತಡೆದಿದ್ದರಲ್ಲದೆ, ಅವರ ಮೇಲೆ ಹಲ್ಲೆಯೂ ನಡೆದಿತ್ತು). ಆ ದೇವಾಲಯಕ್ಕೆ ಅಸ್ಪೃಶ್ಯರಿಗೆ ಪ್ರವೇಶವಿರಲಿಲ್ಲ. ಕಸ್ತೂರಬಾಗೆ ಮತ್ತು ದುರ್ಗಾ ಬಹೆನ್‌ಗೆ ಮಂದಿರಕ್ಕೆ ಹೋಗಬಾರದೆಂದು ಹೇಳಿರಲಿಲ್ಲ. ಮಾರ್ಚ್ 28 ಸೋಮವಾರದಂದು ಎಲ್ಲರೂ ಸಮುದ್ರ ಸ್ನಾನ

ಮಾಡಿ; ಪೇಟೆಯಲ್ಲಿ ಸುತ್ತಾಡಿ ದೇವಸ್ಥಾನಕ್ಕೆ ಹೋದರು. ದೇವಸ್ಥಾನದ ಬಾಗಿಲಲ್ಲಿ 'ಹಿಂದೂಗಳ ಹೊರತು ಮತ್ತ್ಯಾರಿಗೂ ಪ್ರವೇಶ ಇಲ್ಲ' ಎಂಬ ಫಲಕವಿತ್ತು. ಅದನ್ನು ನೋಡಿ ಲೀಲಾ ಮತ್ತು ನಾರಾಯಣ ದೇಸಾಯಿ ಹೊರಗೆ ನಿಂತು ಭಗವಂತನ ದರ್ಶನ ಮಾಡಿದರು. ದುರ್ಗಾ ಬಹೆನ್, ಕಸ್ತೂರ ಬಾ ಮತ್ತಿತರು ಒಳಗೆ ಹೋಗಿ ದೇವರ ದರ್ಶನ ಮಾಡಿಬಂದರು. ಅವರ ಮುಖದಲ್ಲಿ ಸಂಪೂರ್ಣ ತೃಪ್ತಿ ತುಂಬಿತ್ತು. ಎಲ್ಲರೂ ಅಧಿವೇಶನ ನಡೆದ ಸ್ಥಳಕ್ಕೆ ಮರಳಿದರು. ಆ ಸುದ್ದಿ ಹೇಗೋ ಗಾಂಧಿ ಅವರ ಕಿವಿಗೆ ಬಿದ್ದು ತೀವ್ರ ಆಘಾತಗೊಂಡರು. ಗಾಂಧೀಜಿ ಮಹದೇವ್‌ಗೆ ಹೇಳಿದರು "ಮಹದೇವ್ 1927ರಲ್ಲಿ ನಾವು ಈ ದೇವಾಲಯಕ್ಕೆ ಆಗಮಿಸಿದ್ದಾಗ ನಡೆದ ಘಟನೆಯನ್ನು ಎಲ್ಲರಿಗೂ ತಿಳಿಸಬೇಕಾಗಿತ್ತು. ಈಗ ನಾವು ಮೂವರೂ ವಿಚ್ಛೇದನ ಪಡೆಯಬೇಕಷ್ಟೆ" ಎಂದರು. ಗಾಂಧೀ ಅವರ ಕಂಠದಲ್ಲಿ ವಿನೋದಕ್ಕಿಂತ ವೇದನೆ ತುಂಬಿತ್ತು. ಗಾಂಧೀಜಿ ಅಂದು ರಾತ್ರಿಯೆಲ್ಲಾ ಗಾಂಧಿ ನಿದ್ರೆ ಮಾಡಲಿಲ್ಲ. ಮಾರನೆದಿನ ಬೆಳಗ್ಗೆ ದೇವಾಲಯಕ್ಕೆ ಹೋಗಿದ್ದವರನ್ನೆಲ್ಲಾ ಕರೆದು ತಮ್ಮ ಮನಸ್ಸಿನ ನೋವನ್ನು ಒಡೆದು ಹೇಳಿದರು. ಎಲ್ಲರೂ ತಮ್ಮ ತಪ್ಪನ್ನು ಒಪ್ಪಿಕೊಂಡರು. ಮಹದೇವದೇಸಾಯಿ ಆದ ಅಚಾತುರ್ಯಕ್ಕಾಗಿ ಬಹಳ ನೊಂದುಕೊಂಡರು.

## ಪಟ್ಟಶಿಷ್ಯ

ಸಿದ್ದವನಹಳ್ಳಿ ಕೃಷ್ಣಶರ್ಮರು 1938ರ ಡಿಸೆಂಬರ್‌ನಲ್ಲಿ ವಾರ್ಧಾಗೆ ಹೋಗಿ 1939ರ ಅಕ್ಟೋಬರ್ ವರೆಗೂ ಅಲ್ಲಿಯೇ ಇದ್ದು ಬಂದನಂತರ 'ವಾರ್ಧಾಯಾತ್ರೆ' ಎಂಬ ಪ್ರವಾಸ ಕೃತಿಯನ್ನು ಬರೆದರು. ಆ ಕೃತಿಯಲ್ಲಿ ಶರ್ಮರು, 'ಪಟ್ಟಶಿಷ್ಯ' ತಲೆ ಬರಹದಲ್ಲಿ ದೀರ್ಘ ಲೇಖನವನ್ನು ಹೀಗೆ ಬರೆದಿದ್ದಾರೆ.

ಮಹದೇವದೇಸಾಯಿ ಅವರ ಪರಿಚಯವಿಲ್ಲದ ವಾರ್ಧಾಯಾತ್ರೆ ಕಪ್ಪುರವಿಲ್ಲದ ಆರತಿಯಂತೆ. ಅವರ ಜೀವನ ಗಾಂಧೀಜಿಯೊಂದಿಗೆ ಅಷ್ಟು

ಬೆರೆತುಹೋಗಿದೆ. ಗಾಂಧೀಜಿ ರಾಮನಾದರೆ ಮಹದೇವದೇಸಾಯಿ ಲಕ್ಷ್ಮಣ, ಭಾವ-ರೂಪಗಳಿದ್ದಂತೆ, ವಸ್ತು-ಛಾಯೆಗಳಿದ್ದಂತೆ ಅವರ ಸಂಬಂಧ.

ಗಾಂಧೀಜಿ ಇದ್ದಲ್ಲಿ ಮಹದೇವದೇಸಾಯಿ ಇದ್ದಾರೆಯೇ ಎಂದು ಹುಡುಕುವ ಅಗತ್ಯವಿಲ್ಲ. ಸದಾ ಅವರ ಹಿನ್ನಲೆಯಲ್ಲಿ ಅವರ ಮೈಯಂತೆ ಚಲಿಸುತ್ತಾರೆ. ಪರ್ಣಕುಟಿಯಲ್ಲಾಗಲಿ, ಪ್ರವಾಸದಲ್ಲಾಗಲಿ, ಸಂಭಾಷಣೆಗಳಲ್ಲಾಗಲಿ, ಸಭಾಮಧ್ಯದಲ್ಲಾಗಲಿ ಗಾಂಧೀಜಿಯ ಮೇಲೆ ನೆಟ್ಟ ಕಣ್ಣು, ಕೈಯಲ್ಲಿ ಲೇಖನಿ ಕಾಗದ-ಹೀಗೊಂದು ಮೂರ್ತಿ ಕಾಣುಬರುತ್ತದೆ. ಅವರೇ ಮಹದೇವದೇಸಾಯಿ, ಗಾಂಧೀಜಿಯ ಪಟ್ಟಶಿಷ್ಯ.

ಮಹದೇವದೇಸಾಯಿ ಗಾಂಧೀಜಿಯ ಕಾರ್ಯದರ್ಶಿಗಳೆಂದು ಹೆಸರಾಗಿದ್ದಾರೆ. ಆದರೆ ಎಲ್ಲ ಕಾರ್ಯದರ್ಶಿಗಳಂತಲ್ಲ ಇವರು. ಯಜಮಾನರ ಪತ್ರವ್ಯವಹಾರ, ಬಂದು ಹೋಗುವವರು, ಲೆಕ್ಕಾಚಾರ-ಇಷ್ಟೇ ಅವರ ಲೋಕ. ಮಹದೇವದೇಸಾಯಿ ಹಾಗಲ್ಲ. ಗಾಂಧೀಜಿ ಹಾಗೆ ತಿಳಿದೂ ಇಲ್ಲ. ರಾಜಕಾರಣವೇನು, ಆಧ್ಯಾತ್ಮವೇನು, ಲೋಕಾಂತವೇನು, ಏಕಾಂತವೇನು ಎಲ್ಲದರಲ್ಲೂ ಎಡಬಿಡದೆ ಇವರು ಅವರ ಜೀವದ ಗೆಳೆಯನಂತೆ ನಡೆಯುತ್ತಾರೆ. ಇವರಿಲ್ಲದೆ ಗಾಂಧೀಜಿಗೆ ಒಂದು ನಿಮಿಷವೂ ನಡೆಯದು. ಎಲ್ಲಾ ಕೆಲಸದಲ್ಲೂ ಮಹದೇವದೇಸಾಯಿ ಅವರಿಗೆ ಬೇಕು. ಸಂಗಡಿಗರೊಡನೆ ಸಂಭಾಷಣೆ, ಎದಿರಾಳಿಗಳೊಡನೆ ಸಂಧಾನ, ನಾಯಕರೊಡನೆ ಚರ್ಚೆ ಎಲ್ಲಕ್ಕೂ ಅವರ ಪಾಲಿಗೆ ಇವರು ಸಾಕ್ಷಿಯಾಗಿರಬೇಕು. ಗಾಂಧೀಜಿಯ ಎಲ್ಲಾ ಕೆಲಸಗಳಲ್ಲೂ ಎಲ್ಲ ವಿಚಾರಗಳಲ್ಲೂ ಇವರು ಒಂದು ಬಗೆಯ ಆತ್ಮ ಸಾಕ್ಷಿ.

ಸಾಧಾರಣವಾಗಿ ಮಹದೇವದೇಸಾಯಿ ಇರುವುದು ವಾರ್ಧಾ ಬಳಿಯಲ್ಲಿನ ಮಗನವಾಡಿಯಲ್ಲಿ. ಇವರ ಹೆಂಡತಿ ದುರ್ಗಾಬೆನ್ ಮಗ ನಾರಾಯಣ ದೇಸಾಯಿ ಇಷ್ಟು ಇವರ ಸಂಸಾರ. ಇವರಿಗೆಲ್ಲಾ ಒಂದು ಕೋಣೆಯಲ್ಲಿ ಅರ್ಧವಾದರೆ ಉಳಿದರ್ಧ ಇವರ ಆಸ್ತಿಯಾಗಿದ್ದ ಪುಸ್ತಕಗಳಿಗೆ. ಮನೆಯತುಂಬ ಎಲ್ಲಿ ನೋಡಿದರೂ ಪುಸ್ತಕಗಳೇ. ಮಹದೇವದೇಸಾಯಿಗೆ ಓದುವ ಹುಚ್ಚು ಬಹಳ. ಸದಾ ಓದುತ್ತಲೇ ಇರುತ್ತಾರೆ. ಅವರ ಪುಸ್ತಕ ಭಂಡಾರ

ಬಹಳ ಅಮೂಲ್ಯವಾದುದು. ಜಗತ್ತಿನಲ್ಲಿ ಇಂಗ್ಲಿಷ್ ಭಾಷೆಯ ಎಲ್ಲ ಪುಸ್ತಕಗಳ ಮುಖ್ಯ ಗ್ರಂಥಕರ್ತರಿಗೂ ತಮ್ಮ ಪುಸ್ತಕವನ್ನು ಮಹದೇವದೇಸಾಯಿಯ ಸಂಗ್ರಹಕ್ಕೆ ಕಳುಹಿಸುವುದರಲ್ಲಿ ತುಂಬಾ ಸಂತೋಷ. ಇತರ ಭಾಷೆಗಳವೂ ಬರುತ್ತದೆ. ಯಾವುದನ್ನೂ ಬಿಡದೆ ಓದುತ್ತಾರೆ. ನಡುರಾತ್ರಿಯವರೆಗೆ ದೀಪ ಉರಿಸುವುದು ಇವರಿಗೆ ರೂಢಿಯೇ ಆಗಿಹೋಗಿದೆ.

ಓದಿದುದೆಲ್ಲಾ ಅರಗಿಸಿಕೊಂಡು ಬರೆಹಗಳಲ್ಲಿ ಉಪಯೋಗ ಮಾಡುವ ಚಾತುರ್ಯ ಇವರಿಗಿದೆ. 'ಹರಿಜನ' ವಾರ ಪತ್ರಿಕೆಯಲ್ಲಿ ಎಮ್. ಡಿ. ಎಂಬ ಅಕ್ಷರಗಳಿಂದ ಬರುವ ಹೃದ್ಯವಾದ ಗದ್ಯ ಇವರದು. ಇಂಗ್ಲಿಷ್ ಶೈಲಿಯಲ್ಲಿ ಎಂ. ಡಿ. ಯದು ಒಂದು ವಿಶಿಷ್ಟ ಸ್ಥಾನ. 'ನಿರಾಭರಣ ಸುಂದರಿ' ಯಂತೆ ಆ ಶೈಲಿ ಸರಳಮಧುರವಾಗಿದೆ. ಆ ಲೇಖನಗಳಲ್ಲಿ ಆಗಾಗ ಬರುವ ದೃಷ್ಟಾಂತ ಪ್ರಮಾಣಗಳನ್ನು ನೋಡಿದರೆ ಅವರ ಅಗಾಧ ಪಾಂಡಿತ್ಯದ ಗುರುತಾಗುತ್ತದೆ

ಗಾಂಧೀಜಿಗೂ ಇವರಿಗೂ ಈ ವಿಷಯದಲ್ಲಿ ಕಾಂಚನಗಂಗೆ–ಕನ್ಯಾಕುಮಾರಿಗಳಿದ್ದಷ್ಟು ಅಂತರ. ಗಾಂಧೀಜಿಗೆ ಅತಿಯಾಗಿ ಓದುವುದು ಸೇರುವುದಿಲ್ಲ. ಮುಖ್ಯವಾದುದನ್ನು ಅಗತ್ಯವಾದುದನ್ನು ಮಾತ್ರ ಓದಿದರೆ ಸರಿ. ಉಳಿದುದೆಲ್ಲ 'ಕಬ್ಬಿನ ಸಿಪ್ಪೆ' ಎಂದು ಅವರ ಅಭಿಪ್ರಾಯ.

ಇಂಗ್ಲೆಂಡಿನಲ್ಲಿ ಜಾನ್ಸನ್ ಎಂಬ ಸಾಹಿತಿಗೆ ಬಾಸ್‌ವೆಲ್ ಎಂಬ ಗೆಳೆಯನಿದ್ದ. ಜಾನ್ಸನ್‌ನ ಜೀವನದ ಪ್ರಸಂಗಗಳನ್ನು ಆಯಾ ದಿನವೇ ಬರೆದಿಡುತ್ತಿದ್ದ. ಮುಂದೆ ತನ್ನ ಗೆಳೆಯನ ಜೀವನ ಚರಿತ್ರೆಯನ್ನು ವಿಸ್ತಾರವಾಗಿ ಬರೆದು ನಡೆದುದನ್ನು ನಡೆದಂತೆ ವರ್ಣಿಸಿದ. ಹಾಗೆ ಯಾರ ಜೀವನವನ್ನೂ ಚಿತ್ರಗುಪ್ತನಂತೆ ಚಿತ್ರಿಸುವ ಕೆಲಸ ಇನ್ನೆಲ್ಲೂ ನಡೆದಿಲ್ಲ. ಆದರೆ ಮಹದೇವ ದೇಸಾಯಿ ಬಾಸ್‌ವೆಲ್ಲನ ಹಾದಿ ಹಿಡಿದಿದ್ದಾರೆ. ದಿನದಿನವೂ ಗಾಂಧೀಜಿಯ ಜೀವನವನ್ನು ಚಿತ್ರಿಸುತ್ತಿದ್ದಾರೆ. 'ಬಾಸ್‌ವೆಲ್ಲನನ್ನು ಮೀರಿಸುತ್ತಿದ್ದಾನೆ ಮಹದೇವ' ಎಂದು ಗಾಂಧೀಜಿಯೇ ಹೇಳಿದರು.

ದಿನವೂ ಮಗನವಾಡಿಯಿಂದ ಅಂಚೆ ಬಂದಮೇಲೆ ಮಳೆ ಬರಲಿ ಚಳಿಯಿರಲಿ, ಬಿಸಿಲು ಉರಿಯುತ್ತಿರಲಿ, ಕೆಸರು ತುಂಬಿರಲಿ ಪತ್ರಗಳನ್ನು

ತೆಗೆದುಕೊಂಡು ಸೇಗಾಂವಿಗೆ ದೇಸಾಯರ ಪಯಣ. ಆ ನಾಲ್ಕಾರು ವರ್ಷ ಹೀಗೇ ಕಳೆದಿದ್ದಾರೆ. ಇಂಥ ಉಗ್ರ ತಪಸ್ಸು ಜಗತ್ತಿನಲ್ಲಿ ಯಾವ ನಾಯಕನ ಯಾವ ಕಾರ್ಯದರ್ಶಿಗೂ ಸಾಧ್ಯವಿಲ್ಲ. ಮಹದೇವ ದೇಸಾಯರ ಅನನ್ಯ ಶ್ರದ್ಧೆ, ಗಾಂಧೀಜಿ ಅವರಲ್ಲಿ ಇವರಿಗಿರುವ ಅಚಲ ನಿಷ್ಠೆ, ಅವರ ಸೇವೆಯಲ್ಲಿ ಇವರು ಪಡೆಯುವ ಆನಂದ 'ನಭೂತೋ ನಭವಿಷ್ಯತಿ'. ಗುರುವಿಗಾಗಿ ತಮ್ಮ ಇಡೀ ಜೀವನವನ್ನೇ ಧಾರೆಯೆರೆದದ್ದು ಮಾನವ ಜಾತಿಯ ಇತಿಹಾಸದಲ್ಲೇ ಕಡಿಮೆ.

ಮಹದೇವದೇಸಾಯಿ ಗುಜರಾತಿ ಸಮುದಾಯದಲ್ಲಿ ಬೆಳೆದು ಬಂದವರು. ಕಾಲೇಜಿನಲ್ಲಿ ಸಿಡಿಲುಮರಿಯೆಂದು ಹೆಸರಾದ ವಿದ್ಯಾರ್ಥಿ. ಗಾಂಧೀಜಿ ದಕ್ಷಿಣ ಆಫ್ರಿಕಾದಿಂದ ಆ ಹೊತ್ತಿಗೆ ಭಾರತಕ್ಕೆ ಬಾರದೆ ಇದ್ದರೆ ವಕೀಲಿಯಲ್ಲಿ ಮುಂದುವರೆಯುತ್ತಿದ್ದರು. ದೇವರು ಅವರಿಗೆ ಆ ಅನುಕೂಲಗಳನ್ನು ಕೊಟ್ಟೇ ಇದ್ದ. ಆದರೆ ಸ್ವಾರ್ಥ ಜೀವನ ಇವರಿಗೆ ಹೇಗೆ ರುಚಿಸಬೇಕು? ಗಾಂಧೀಜಿ ಗುಜರಾತಿಗೆ ಬಂದೊಡನೆ ಅವರ ಒಡನಾಟಕ್ಕೆ ಸೇರಿಬಿಟ್ಟರು.

ಗಾಂಧೀಜಿಯ ಸಹವಾಸ ಸುಖವಾದುದಲ್ಲ. ಅವರ ಕಠೋರ ನಿಯಮಗಳೂ, ಉಗ್ರ ಸರಳತೆಯೂ ಜೀವನವನ್ನು ಸುಖ ವಿಲಾಸಗಳ ಕಡೆ ಒಯ್ಯುವುದಿಲ್ಲ. ಕರ್ತವ್ಯವೇ ಸೌಂದರ್ಯ ಮತ್ತು ಆನಂದವೆನ್ನುವ ದೃಷ್ಟಿ ಅವರದು. ಅವರೊಡನೆ ಇರುವುದೆಂದರೆ ಮುಳ್ಳಿನ ಹಾಸಿಗೆಯ ಮೇಲೆ ಮಲಗಿದಂತೆಯೇ.

20ವರ್ಷಗಳಿಂದ ಗಾಂಧೀಜಿಯ ಸೇವೆಯನ್ನು ದೇಸಾಯಿ ಅವಿಶ್ರಾಂತವಾಗಿ ನಡೆಸಿದ್ದಾರೆ. ಮೊದಲು 'ಯಂಗ್ ಇಂಡಿಯಾ' ನಂತರ 'ಹರಿಜನ' ಇವೆರಡು ಪತ್ರಿಕೆಗಳನ್ನು ಗಾಂಧೀಜಿ ನಡೆಸಿದುದು ಇವರ ಬಲದಿಂದ. ಆ ಪತ್ರಿಕೆಗಳು ಎಲ್ಲ ಪತ್ರಿಕೆಗಳಂತೆ ಸುದ್ದಿಯ ಪತ್ರಿಕೆಗಳಲ್ಲ. ಅದೊಂದು ಸಾಪ್ತಾಹಿಕ ಸಂದೇಶ. ಹತ್ತು ಜನರ ಅಭಿಪ್ರಾಯಗಳ ಸಂಗ್ರಹವೂ ಅಲ್ಲ. ಗಾಂಧೀಜಿ ರಾಷ್ಟ್ರ ನಿರ್ಮಾಣ ಕಾರ್ಯದಲ್ಲಿ ಇಪ್ಪತ್ತು ವರ್ಷ ದೇಶಕ್ಕೆ, ಕಾರ್ಯಕರ್ತರಿಗೆ ವಾರವಾರವೂ ಕೊಡುತ್ತಿದ್ದ

ಪಾತ. ಅವರಿಗೆ ತಮ್ಮ ಸಿದ್ಧಾಂತಗಳನ್ನು ಜನರಿಗೆ ತಿಳಿಸುವ ಸಾಧನ. ಈ ಕೆಲಸದಲ್ಲಿ ಮಹದೇವದೇಸಾಯಿ, ಪ್ಯಾರೇಲಾಲ್‌ಜಿ ಇಬ್ಬರೂ ಗಾಂಧೀಜಿಗೆ ನೆರವಾಗುತ್ತಿದ್ದಾರೆ. ಮಹದೇವದೇಸಾಯಿ ವಾರವಾರವೂ ಗಾಂಧೀಜಿಯ ಜೀವನವನ್ನು ಚಿತ್ರಿಸುತ್ತಾ ದೇಶದಲ್ಲಿ ಅವರ ಬಗ್ಗೆ ಅಪಾರ ಭಕ್ತಿಯನ್ನುಂಟುಮಾಡಿದರು. ಮೋಹಕ ಶೈಲಿಯಿಂದ ಗಾಂಧಿ ಅವರ ಸಿದ್ಧಾಂತಗಳನ್ನು ವಿವರಿಸಿ ಜನರಿಗೆ ರುಚಿಸುವಂತೆ ಮಾಡಿದ್ದಾರೆ. ನಿಜವಾಗಿ ದೇಸಾಯರ ಕೈವಾಡವಿಲ್ಲದಿದ್ದಲ್ಲಿ 'ಹರಿಜನ' ಪತ್ರಿಕೆ ಸಪ್ಪೆಯಾಗುತ್ತಿತ್ತೇನೋ ಎಂದೆನಿಸುತ್ತದೆ. ಕಳೆದ ವರ್ಷ ದೇಸಾಯಿ ಅವರು ಬೇನೆ ಬಿದ್ದು ವಾರ್ಧಾದಿಂದ ಸಿಮ್ಲಾಕ್ಕೆ ವಿಶ್ರಾಂತಿಗಾಗಿ ಹೋದಾಗ ಗಾಂಧೀಜಿಗೆ ಬಹಳ ನೋವಾಯಿತು. ಹರಿಜನದ ಸಂಪಾದನಾ ಕಾರ್ಯದಲ್ಲಿ ಇದರಿಂದ ಆಗುವ ಲೋಪಗಳನ್ನು ಮನ್ನಿಸಬೇಕೆಂದು ಓದುಗರಲ್ಲಿ ಕೇಳುತ್ತಾ ಹರಿಜನ ಪತ್ರಿಕೆ ನಿಂತರೂ ನಿಲ್ಲಬಹುದು ಎಂದರು.

ಪತ್ರಿಕಾ ವ್ಯವಸಾಯದಲ್ಲಿ ಈ ಗುರು ಶಿಷ್ಯರಿಬ್ಬರೂ ಸೇರಿ ಮಾಡಿದ ಕ್ರಾಂತಿ ಅನುಪಮವಾದುದು. ಇತಿಹಾಸದಲ್ಲೇ ಇಂಥ ಉದಾಹರಣೆಗಳಿಲ್ಲ. ಸಂಪಾದಕೀಯವನ್ನು 'ನಾನು' ಎಂದು ಏಕವಚನದಲ್ಲಿ ಮೊದಲು ಬರೆದದ್ದು ಗಾಂಧೀಜಿ. ಯಾರಿಗೂ ಅದನ್ನು ಅನುಕರಿಸುವ ಧೈರ್ಯವಾಗಿಲ್ಲ. ಒಬ್ಬ ಒಂದು ವ್ಯಕ್ತಿಯ ಅಭಿಪ್ರಾಯಗಳ ಸಲುವಾಗಿ ಎಲ್ಲೂ ಪತ್ರಿಕೆ ಹೊರಟಿಲ್ಲ, ಹೊರಡುವ ಸಂಭವವೂ ಕಾಣುವುದಿಲ್ಲ. ಮಹದೇವ ಭಾಯಿಯಹಾಗೆ ತನ್ನು ಗುರು-ನಾಯಕನ ಜೀವನವನ್ನು ದಿನದಿನವೂ ಚಿತ್ರಿಸುತ್ತ ಬಂದವರಿಲ್ಲ. ಪತ್ರಿಕಾ ವ್ಯವಸಾಯದಲ್ಲಿ ಸತ್ಯ ಸಂಯಮಗಳನ್ನು ತಂದು ದೇಸಾಯಿ ಒಂದು ಮಾದರಿಯಾಗಿದ್ದಾರೆ; ತರುಣರಿಗೆ ಒಂದು ಸ್ಫೂರ್ತಿಯಾಗಿದ್ದಾರೆ. ಗಾಂಧೀಜಿ ಒಮ್ಮೆ ಬರೆದರು, 'ಕೈಯಲ್ಲಿ ಲೇಖನಿ ಹಿಡಿದೇ ತನ್ನ ಕೊನೆಯ ಘಳಿಗೆ ಕಳೆಯಲು ಮಹದೇವ ಸದಾಸಿದ್ಧ'. ಇದಕ್ಕಿಂತ ಚೆನ್ನಾಗಿ ದೇಸಾಯಿ ಅವರ ವ್ಯಂಗ್ಯ ಚಿತ್ರ ದೇಸಾಯರದು ಯಾರೂ ಬರೆಯಲಾರರು.

ಮಹದೇವಭಾಯಿ ಬರೀ ಗೊಡ್ಡು ಪಂಡಿತರಲ್ಲ, ಒಣ ಬರೆಹಗಾರರೂ ಅಲ್ಲ. ತುಂಬಾ ರಸಿಕರು. ಇವರದು ಕಲೆಯ ಕೈ. ಸಾಹಿತ್ಯದಲ್ಲಿ ಪೂರಾ

ಒಲವು. ಇಂಗ್ಲಿಷ್, ಸಂಸ್ಕೃತ, ಹಿಂದೀ ಸಾಹಿತ್ಯದಿಂದ ಆಗಾಗ ಚೆಲುವಿನ ನುಡಿಗಳನ್ನೂ ಉದಾಹರಿಸುತ್ತಿದ್ದರು. ಅರ್ಥಶಾಸ್ತ್ರ, ವೇದಾಂತ ಮುಂತಾದ ವಿಷಯಗಳನ್ನು ಇವರು ಸುಲಿದ ಬಾಳೆಯ ಹಣ್ಣಿನಂತೆ ವಿವರಿಸುತ್ತಿದ್ದರು. ಇವರ ಲೇಖನಿ ಯಕ್ಷ ದಂಡವಾಗಿತ್ತು. ಅದರಲ್ಲೊಂದು ಬಗೆಯ ಇಂದ್ರಜಾಲವಿದೆಯೆಂದರೆ ಏನೂ ತಪ್ಪಾಗಲಾರದು.

ಮಹದೇವಭಾಯಿಯ ಜೀವನದಲ್ಲೂ ಕಲಾವಂತಿಕೆಯಿದೆ. ಕೇವಲ ಸಾಹಿತ್ಯದಲ್ಲೇ ಮಾತ್ರ ಅಲ್ಲ. ಇವರು ಗಾಂಧೀ ಜೀವನದಲ್ಲಿ ಬೆರೆತರು. ಇವರ ಕೋಣೆಯಲ್ಲಿ ಎಲ್ಲಾ ಚೊಕ್ಕಟ, ಎಲ್ಲ ಪದಾರ್ಥಗಳೂ ತಮ್ಮ ತಮ್ಮ ಸ್ಥಾನದಲ್ಲಿ ಇರುತ್ತದೆ. ಇವರು ಓದಿ ಮುಗಿಸಿಟ್ಟ ಪುಸ್ತಕ ಯಾರೂ ಮುಟ್ಟಿಲ್ಲವೇನೋ ಎನ್ನುವ ಹಾಗೆ ಇರುತ್ತವೆ. ಉಡುಗೆಯಲ್ಲಂತೂ ಶುದ್ಧ ಬಿಳೀ ಖಾದಿ. ಕೈ ತಪ್ಪಿಯಾದರೂ ಮಾಸಿದ ಬಟ್ಟೆ ತೊಡುವುದಿಲ್ಲ. ಮಾತಿನಲ್ಲಿ ಸವಿಜೇನು. ಹಿತವಾಗಿ ರುಚಿಯಾಗಿ ತರ್ಕ ಮಾಡುತ್ತಾ ಎದುರಾಳಿಯನ್ನು ತಮ್ಮ ಅಭಿಪ್ರಾಯಕ್ಕೆ ತಿರುಗಿಸುತ್ತಾರೆ.

ಈ ಹಿಡಿತವೇ ಇವರನ್ನು ಗಾಂಧೀಜಿಯ 'ದೂತ' ನನ್ನಾಗಿ ಮಾಡಿದ್ದವು. ಮಹದೇವಭಾಯಿಯ ಸಂಧಾನ ಕೌಶಲ ಹಿಂದೂಸ್ಥಾನಕ್ಕೆ ಗೊತ್ತೇ ಇದೆ. ಸರದಾರ ಪೃಥ್ವೀ ಸಿಂಗರ ಬಿಡುಗಡೆ, ದೆಹಲಿಯ ರಾಜಕೀಯ ಕೈದಿಗಳ ಸ್ವಾತಂತ್ರ್ಯ, ಇದರ ಫಲಗಳು. ವೈಯುಕ್ತಿಕ ಜೀವನದಲ್ಲಿ ಮತ್ತು ರಾಷ್ಟ್ರೀಯ ಜೀವನದಲ್ಲಿ ಇದರ ಆ ನೈಪುಣ್ಯತೆ ಹೇಗೆ ಪರಿಣಾಮಕಾರಿಯಾಗಿದೆ ಎಂಬುದು ಜನರಿಗೆ ತಿಳಿಯುವುದು ಕಷ್ಟ.

ಇವರ ಬಾಳಿಗೇ ಬಣ್ಣ ಕೊಟ್ಟ ಈ ಕಲಾವಂತಿಕೆಗೆ ಇವರ ಸ್ವಾವಲಂಬನೆ, ಆತ್ಮನಿರೀಕ್ಷಣೆಗಳೇ ತಳಹದಿಯೆನ್ನಬಹುದು. ದೇಸಾಯಿ ಎಲ್ಲ ಕೆಲಸವನ್ನೂ ತಾವೇ ಮಾಡಿಕೊಳ್ಳುತ್ತಾರೆ. ತಮ್ಮ ಕೋಣೆ ತಾವೇ ಗುಡಿಸುವರು. ತಮ್ಮ ಎಲ್ಲಾ ವಸ್ತುಗಳನ್ನೂ ತಾವೇ ಸರಿಯಾಗಿಡುತ್ತಿದ್ದರು. ದುರ್ಗಾಬೆಹೆನ್ ಇದ್ದರೂ ಈ ಕಾರ್ಯಕ್ರಮಗಳಲ್ಲಿ ವ್ಯತ್ಯಾಸವೇನೂ ಆಗುವುದಿಲ್ಲ. ಆತ್ಮ ನಿರೀಕ್ಷಣೆಯು ಗಾಂಧೀಗುಂಪಿಗೆ ಒಂದು ಲಕ್ಷಣವಾದರೆ ದೇಸಾಯಿ ಒಂದು ತೂಕ ಹೆಚ್ಚು. ಅವರ ಹತ್ತಿರ ಯಾವಾಗಲೂ ಒಂದು ನಿಘಂಟು ಇರುತ್ತಿತ್ತು.

ಸರಳತೆಯೂ ಮಹದೇವಭಾಯಿಯ ಜೀವನಕ್ಕೊಂದು ಸಿಂಗಾರವಾಗಿತ್ತು. ಕೊಠಡಿಯಲ್ಲಿ ಕುರ್ಚಿಯಿಲ್ಲ ಮೇಜಿಲ್ಲ. ನೆಲದ ಮೇಲೆ ಒಂದು ಚಾಪೆ. ಸುತ್ತಲೂ ಪತ್ರಿಕೆ, ಪತ್ರ, ಪುಸ್ತಕ, ಒಂದು ಮೂಲೆಯಲ್ಲಿ ರಾಟೆ. ಎದುರಿನಲ್ಲಿ ಕಪಾಟುಗಳು; ಅವುಗಳ ತುಂಬ ಪುಸ್ತಕ, ಕಾಗದ. ಇವರ ಕಣ್ಣಿನ ಕನ್ನಡಕ ಕೂಡ ನಿಕ್ಕಲ್ ಕಟ್ಟಿನದು. ಅದೂ ಓಬಿರಾಯನ ಕಾಲದ್ದು.

ದುರ್ಗಾ ಬೆಹೆನ್ ಯಾವತ್ತೂ ಸನಾತನಿಯಾಗೇ ಉಳಿದಳು. ಗಾಂಧೀಜಿಯ ಅನೇಕ ಸುಧಾರಣೆಗಳು ಆಕೆಗೆ ಒಗ್ಗುತ್ತಿರಲಿಲ್ಲ. ಮಹದೇವಭಾಯಿ ಹರಿಜನರ ವಿಷಯವಾಗಿ ತೆಗೆದುಕೊಂಡ ನಿರ್ಧಾರಗಳು ಆಕೆಗೆ ಸರಿಕಾಣುತ್ತಿರಲಿಲ್ಲ. ಆದರೆ ಇವರ ದಾಂಪತ್ಯದಲ್ಲಿ ಎಳ್ಳಷ್ಟು ವಿರಸವಿರಲಿಲ್ಲ. ಆಕೆಗೆ ತನ್ನ ಮನಸ್ಸಿಗೆ ಬಂದಂತೆ ನಡೆಯಲು ಸಂಪೂರ್ಣ ಸ್ವಾತಂತ್ರ್ಯವಿತ್ತು. ಮಹದೇವದೇಸಾಯಿ ಈ ವಿಷಯದಲ್ಲಿ ಗಾಂಧೀ ಗುಂಪಿಗೆ ಆದರ್ಶರಾಗಿದ್ದರು. ಗಾಂಧೀಜಿ ಕಸ್ತೂರಬಾಗೂ ಸಹ ಅಷ್ಟು ಸ್ವಾತಂತ್ರ್ಯವನ್ನೂ ಕೊಟ್ಟಿರಲಿಲ್ಲ

ಮಹದೇವದೇಸಾಯಿ ಗಾಂಧೀಜಿಗೆ ಲಕ್ಷ್ಮಣನಿದ್ದಂತೆ. ಸಾಧಾರಣವಾಗಿ ಗುರು–ಶಿಷ್ಯರ ಸಂಬಂಧ ಸೂಜಿಗಲ್ಲು ಮತ್ತು ಕಬ್ಬಿಣದ ರೀತಿ. ಇವರದು ಹಾಗಿಲ್ಲ. ಪರಸ್ಪರವಾದ ಸೆಳೆತ. ಅವರಂಥ ಗುರು ದೊರೆತುದು ಇವರ ಜೀವನದ ಭಾಗ್ಯವಾದರೆ, ಇವರಂಥ ಶಿಷ್ಯ ಲಭಿಸಿದ್ದೂ ಗಾಂಧಿ ಅವರ ಪುಣ್ಯದ ಫಲ. ರಾಮಕೃಷ್ಣ ಪರಮಹಂಸರ ಸರ್ವ ತಪಸ್ಸನ್ನೂ ಆಹ್ವಾನಿಸಿಕೊಂಡು ಗುರುವನ್ನು ಬೆಳಗಿಸಿ ಸ್ವಾಮಿ ವಿವೇಕಾನಂದ ಶಿಷ್ಯತ್ವದ ಆದರ್ಶವನ್ನು ಜಗತ್ತಿಗೆ ತೋರಿದರು. ಮಹದೇವದೇಸಾಯಿ ಅವರು ಗುರುವಿನ ಜೀವನದಲ್ಲಿ ತಮ್ಮ ಜೀವನವನ್ನು ಲೀನಗೊಳಿಸಿ, ಅವರ ಶ್ರುತಿಗೆ ತಮ್ಮ ದನಿಗೂಡಿಸಿ, ಅವರ ಕುಂಚಕ್ಕೆ ತಮ್ಮ ಬಣ್ಣ ಸೇರಿಸಿ ರಸಮಯ ಗೆಳೆತನದ ಆದರ್ಶಚಿತ್ರವನ್ನು ತೋರಿದರು[10]

## ವಿಚಿತ್ರ ಪ್ರಯೋಗ

1939ರ ಸಮಯದಲ್ಲಿ ಗಾಂಧೀಜಿ ಸೇಗಾಂವ್ ಆಶ್ರಮದಲ್ಲಿ ವಿಚಿತ್ರ ಪ್ರಯೋಗವೊಂದನ್ನು ಮಾಡಿದರು. ಅದು ಯಾವುದೆಂದರೆ ದೃಷ್ಟಿನಿಗ್ರಹದ ಪ್ರಯತ್ನ. 24ತಾಸು ಕಣ್ಣು ಮುಚ್ಚಿಕೊಂಡು ಹುಟ್ಟು ಕುರುಡನಂತಿರುವುದು. ಆಶ್ರಮವಾಸಿಗಳಿಗೆಲ್ಲ ಗಾಬರಿಯಾಯಿತು. ದಿನಚರಿಯಲ್ಲಿ ಯಾವುದನ್ನೂ ಬದಲು ಮಾಡಲಿಲ್ಲ. ಯಥಾಕ್ರಮವಾಗಿ ಸಂಭಾಷಣೆಗಳು, ಪತ್ರವ್ಯವಹಾರ ಎಲ್ಲವೂ ನಡೆದವು. ಕಾಗದ ಓದಿಸಿ ಕೇಳಿ ಉತ್ತರ ಬರೆಸಿದರು. ಸಂದರ್ಶನದಲ್ಲಿ ಕಣ್ಣುಮುಚ್ಚಿಕೊಂಡೇ ಬಂದವರೊಡನೆ ಮಾತಾಡಿದರು. ಓಡಾಡಬೇಕಾದರೆ ಯಾರಾದರೂ ಕೈ ಹಿಡಿದು ಕರೆದೊಯ್ಯಬೇಕು. ಇದೇನು ಹುಚ್ಚು ಎಂದು ಅಲ್ಲಿದ್ದವರೆಲ್ಲಾ ಅಂದರು. ಆ ಸಮಯದಲ್ಲಿ ಮಹದೇವದೇಸಾಯಿ ಕಲಕತ್ತೆಗೆ ಹೋಗಬೇಕಾಗಿತ್ತು. ಕೆಲವು ವಾರಗಳವರೆಗೆ ಬರುವಹಾಗಿರಲಿಲ್ಲ. ಕಣ್ಣು ತೆರೆದು ನನ್ನನ್ನು ನೋಡುವವರೆಗೆ ಊರಿಗೆ ಹೋಗುವುದಿಲ್ಲವೆಂದು ಮಹದೇವದೇಸಾಯಿ ಹಠ ಹಿಡಿದರು. ಕೊನೆಗೆ ಅವರನ್ನೊಮ್ಮೆ ನೋಡಿದ ಮೇಲೆ ಕಲಕತ್ತೆಗೆ ಹೋದರು. ಎರಡ್ಮೂರು ದಿನಗಳ ನಂತರ ಆ ವ್ರತ ಬಿಟ್ಟರು. ಪುನಃ ಗಾಂಧೀಜಿ ಆ ಪ್ರಯೋಗ ಮಾಡಲಿಲ್ಲ[11].

## ನಾರಾಯಣ ದೇಸಾಯಿಯ ನೆನಪು

ಮಹದೇವದೇಸಾಯಿಯ ಪುತ್ರ ನಾರಾಯಣ ದೇಸಾಯಿ 1965ರಲ್ಲಿ ಬರೆದಿರುವ 'ಬಾಪುವಿನ ಮಡಿಲಲ್ಲಿ' ಪುಸ್ತಕದಲ್ಲಿ ತಂದೆಯ ಬಗ್ಗೆ ಹೀಗೆ ನೆನಪಿಸಿಕೊಂಡಿದ್ದಾರೆ:

ಬಾಪುವಿನ ಆಶ್ರಮ ಸೇರಿದ ಕಾಕಾ(ತಂದೆ) ಅವರೊಡನಿದ್ದ 25 ವರ್ಷಗಳಲ್ಲಿ ಭಾನುವಾರವೆಂದಾಗಲೀ, ದೀಪಾವಳಿ, ಹೋಳಿ ಹುಣ್ಣಿಮೆ ಅಥವಾ ಬೇಸಿಗೆ ಎಂದಾಗಲೀ ರಜೆ ತೆಗೆದುಕೊಂಡದ್ದೇ ಇಲ್ಲ. ಎರಡು ಸಲ ಮಾತ್ರ ರಜೆ ತೆಗೆದುಕೊಂಡಿದ್ದರು. ಮೊದಲನೆಯ ಸಲ ಟೈಫಾಯ್ಡ್ ಬಂದಿದ್ದಾಗ ಮತ್ತು ಎರಡನೆಯ ಸಲ ರಕ್ತದೊತ್ತಡ ಹೆಚ್ಚಾಗಿ ವಿಶ್ರಾಂತಿಗಾಗಿ

ಸಿಮ್ಲಾಗೆ ಹೋಗಿದ್ದಾಗ. ಅವರ ತಂದೆ ತೀರಿಕೊಂಡಾಗಲೂ ರಜೆ ತೆಗೆದುಕೊಂಡಿರಲಿಲ್ಲ. ಗಾಂಧೀಜಿ ಆ ಸಮಯದಲ್ಲಿ ಮಹದೇವದೇಸಾಯಿಗೆ ಕೊಡುತ್ತಿದ್ದ ಸಂಬಳ ತಿಂಗಳಿಗೆ 70 ರೂಪಾಯಿ ಮಾತ್ರ.

1938ರಲ್ಲಿ ಮಗನ್‌ವಾಡಿಯಲ್ಲಿದ್ದಾಗ ಅವರ ರಕ್ತದೊತ್ತಡ ಏರಿತ್ತು. ಆಗಾಗ ತಲೆ ಸುತ್ತು ಬರುತ್ತಿತ್ತು. ಇದಕ್ಕೆ ಮುಖ್ಯ ಕಾರಣ ವಾರ್ಧಾದಲ್ಲಿನ ಪ್ರಚಂಡ ಬಿಸಿಲು. ಇಂತಹ ದೈಹಿಕ ಶ್ರಮದೊಡನೆ ಬಾಪುವಿನ ಕೆಲಸದ ಹೊರೆಯನ್ನು ನಿಭಾಯಿಸಬೇಕೆಂದರೆ ಅದು ಕಾಕಾಗೆ ಮಾತ್ರ ಸಾಧ್ಯವಾಗಿತ್ತು. 10–15ವರ್ಷಗಳಂತೂ ಅವರು ದಿನದಲ್ಲಿ 15 ಗಂಟೆಗಳಿಗೆ ಕಡಿಮೆ ಕೆಲಸ ಮಾಡಿದ್ದಂತೂ ನಾನು ನೋಡಿರಲಿಲ್ಲ. ನಾವು ಮಗನ್‌ವಾಡಿಯಿಂದ ಸೇವಾಗ್ರಾಮದಲ್ಲೇ ಇರಲು ಹೋದಾಗ ಆ ಓಡಾಟದ ಶ್ರಮ ಕಡಿಮೆ ಆಯಿತು. ಆದರೆ ಅಷ್ಟು ಗಂಟೆಗಳ ಕೆಲಸ ಹೆಚ್ಚಾಯಿತು.

ಆಶ್ರಮದಲ್ಲಿ ದಿನವಿಡೀ ಕೆಲಸ ಮಾಡಿದ ನಂತರ ರಾತ್ರಿ ಮಲಗುವ ಮುನ್ನ ಯಾವುದಾದರೂ ಪುಸ್ತಕ ಓದುವ ಹವ್ಯಾಸ ಇವರದು. ಇವರಿಗಿಂತ ಹೆಚ್ಚು ಓದುವವರು ಯಾರೂ ಇರಲಿಲ್ಲ. ಇವರ ಕೆಲಸಗಳಲ್ಲಿ ಮುಖ್ಯವಾದುವೆಂದರೆ ಪ್ರತಿದಿನ ಬರುತ್ತಿದ್ದ ಕಾಗದವನ್ನು ಓದಿ ಆ ಪತ್ರಗಳಿಗೆ ಜವಾಬು ಬರೆಯುವುದು. ಬಾಪುವನ್ನು ನೋಡಲು ಬರುತ್ತಿದ್ದ ಜನರನ್ನು ಭೇಟಿ ಮಾಡಿ, ಮಾತನಾಡಿ ಬಾಪುವಿನ ಸಮಯ ಉಳಿಸುವುದು, ಭೇಟಿಗಳ ಬಗ್ಗೆ ವರದಿ ಬರೆದಿಡುವುದು ಮತ್ತು ಹರಿಜನ ವಾರಪತ್ರಿಕೆಗೆ ಲೇಖನ ಬರೆಯುವುದು ಅಥವಾ ಅನುವಾದ ಮಾಡಿಕೊಡುವುದು ಆಗಿತ್ತು. ಈ ದೈನಂದಿನ ಕೆಲಸಗಳಲ್ಲದೆ ಯಾವಾಗಲಾದರೂ ಪುಸ್ತಕ ಬರೆಯುವುದು, ಸಮಾಚಾರ ಪತ್ರಿಕೆಗಳಿಗೆ ಲೇಖನ ಬರೆಯುವುದು, ಯಾವುದಾದರೂ ಸಭೆಗೆ ಭಾಷಣ ನೀಡಲು ಹೋಗುವುದು, ಇವೆಲ್ಲ ಹೆಚ್ಚುವರಿ ಕೆಲಸ ಎಂದು ಹೇಳಬಹುದು.

ಬಾಪುವಿನೊಡನೆ ಕೆಲಸ ಮಾಡುವುದೆಂದರೆ ಸುಲಭ ಅಲ್ಲ. ಕಾಕಾ ಅಷ್ಟೊಂದು ಕೆಲಸವನ್ನು ಹೇಗೆ ಮಾಡುತ್ತಿದ್ದರೋ, ನೆನಸಿಕೊಂಡರೆ ಆಶ್ಚರ್ಯವಾಗುತ್ತದೆ. ನನಗನಿಸುತ್ತೆ, ಬಾಪು ಮತ್ತು ಕಾಕಾ ನಡುವೆ ಇದ್ದ

ತಾದಾತ್ಮ್ಯದಿಂದಲೇ ಅದು ಸಾಧ್ಯವಾಗಿತ್ತು ಎಂದು. ಇದರಲ್ಲಿ ಸೇವಕನ ಭಕ್ತಿ ಮತ್ತು ಮಿತ್ರನ ನಿಷ್ಠೆಯ ಅಪೂರ್ವ ಮಿಲನವಿತ್ತು.

ಕಾಕಾರವರ ವ್ಯಕ್ತಿತ್ವ, ಬಾಪುವಿನ ವ್ಯಕ್ತಿತ್ವಕ್ಕಿಂತ ಬಹಳ ಭಿನ್ನವಾದ, ಪ್ರಬಲ ವ್ಯಕ್ತಿತ್ವ ಆಗಿತ್ತು. ಬಾಪುವೆಂಬ ವಿಭೂತಿ ಪುರುಷ ಸೂರ್ಯನಂತೆ ಪ್ರಖರ ಎಂದು ಹೇಳುವುದಾದರೆ, ನನ್ನ ಕಾಕಾರವರದು ಚಂದ್ರನಂತೆ ಶೀತಲ. ಬಾಪು ನಿಸ್ವಾರ್ಥ ಕರ್ಮಯೋಗಿಯಾಗಿದ್ದರೆ ಕಾಕಾ ರಸಿಕ ಭಕ್ತ. ಬಾಪು ಹಿಮಾಲಯದಂತೆ ಎತ್ತರ ಮತ್ತು ಉಜ್ವಲ, ಆದರೆ, ಕಾಕಾ ಗಂಗೆಯಂತೆ ಕರುಣಾಮಯಿ. ಇವರಿಬ್ಬರ ವ್ಯಕ್ತಿತ್ವಗಳು ಅಷ್ಟು ಭಿನ್ನವಾಗಿದ್ದರೂ ಇಬ್ಬರ ನಡುವೆ ಆತ್ಮೀಯ ಬೆಸುಗೆಯೊಂದಿತ್ತು.

ಕೆಲವು ಉದಾಹರಣೆಗಳನ್ನು ನೋಡಿ. ಬರವಣಿಗೆಯ ವಿಷಯದಲ್ಲಿ, ಬಾಪುವಿನದು ನೇರ, ವ್ಯವಹಾರಿಕ. ಅವರು ಸಂಕ್ಷಿಪ್ತ ಬರಹದ ಸಾಮ್ರಾಟ. ಒಂದು ಪದದಲ್ಲಿ ಕೆಲಸವಾಗುವುದಾದರೆ ಎರಡನೆಯ ಪದ ಬಳಸುವವರಲ್ಲ. ಕಾಕಾ ಸ್ವಚ್ಛಂದವಾಗಿ ಕಲ್ಪನೆಯಲ್ಲಿ ಗರಿಗೆದರುವವರು. ಅವರ ಬರಹದಲ್ಲಿ ಶಬ್ದಾಲಂಕಾರಗಳ ಸುರಿಮಳೆ ಇರುತ್ತಿತ್ತು. ಆದರೂ ಅವರು ಬಾಪುವಿನ ಶೈಲಿಯನ್ನು ಚನ್ನಾಗಿ ಕರಗತ ಮಾಡಿಕೊಂಡಿದ್ದರು. 'ಹರಿಜನ' ಪತ್ರಿಕೆಯ ಓದುಗರು, ಲೇಖನದ ಕೊನೆಯಲ್ಲಿ ಎಮ್. ಕೆ. ಜಿ. (ಮೋಹನ್‌ದಾಸ್ ಕರಮ ಚಂದ ಗಾಂಧಿ) ಅಥವಾ ಎಮ್. ಡಿ. (ಮಹದೇವದೇಸಾಯಿ)ಎಂದು ಓದುವ ತನಕ ಇಬ್ಬರಲ್ಲಿ ಯಾರು ಬರೆದಿರುವುದು ಎಂದು ತಿಳಿಯುವುದಿಲ್ಲ ಎಂದು ಬರೆದದ್ದುಂಟು.

'ಹರಿಜನ ಪತ್ರಿಕೆಗೆ ಕಾಕಾ ಬರೆಯುತ್ತಿದ್ದ ಲೇಖನಗಳನ್ನು ಬಾಪುವಿಗೆ ತೋರಿಸದೆ ಮುದ್ರಣಕ್ಕೆ ಕಳುಹಿಸುತ್ತಿರಲಿಲ್ಲ. ಬಾಪು ಅವುಗಳನ್ನು ಸೂಕ್ಷ್ಮವಾಗಿ ಓದಿ, ಅಗತ್ಯವಿದ್ದರೆ, ತಿದ್ದುಪಡಿಗಳನ್ನೂ ಮಾಡುವರು. ಕೆಲವೊಮ್ಮೆ, ನನ್ನ ತಂದೆ, ಬಾಪು ಓದಲೆಂದು ಲೇಖನ ಬರೆದು ಇಟ್ಟಿರುತ್ತಿದ್ದರು. ಅದನ್ನು ಓದಿದನಂತರ ಬಾಪು ಅವರ ಹಸ್ತಾಕ್ಷರ ಹಾಕಿಟ್ಟಿದ್ದರೆ, ಅದು ಬಾಪುವಿನ ಲೇಖನವೆಂದೇ ಪ್ರಕಟವಾಗಿ ಬಿಡುತ್ತಿತ್ತು. 1942ರ ಆಂದೋಲನಕ್ಕೆ

ಮುಂಚಿತವಾಗಿ ಬರೆದಿದ್ದ 'ಬ್ರಿಟನ್ನಿನ ಪ್ರತಿಯೊಬ್ಬ ಪ್ರಜೆಯಲ್ಲಿ ಬಿನ್ನಹ' ಎಂಬುದು ಇಂತಹ ಒಂದು ಲೇಖನವಾಗಿತ್ತು.

ಬಾಪುವಿನ ಸಮಯ ಉಳಿಸಲು ರಾಜಾಜಿ, ನೆಹರು ಅಂತಹ ರಾಷ್ಟ್ರೀಯ ನಾಯಕರೂ, ಕೆಲವು ಸಾರಿ ಕಾಕಾ ಬಳಿ ಮಾತನಾಡಿ ಎಷ್ಟೋ ಕೆಲಸಗಳನ್ನು ಮುಗಿಸಿಕೊಳ್ಳುತ್ತಿದ್ದರು. ಕಾಕಾಗೆ ಶೀಘ್ರಲಿಪಿ ತಿಳಿದಿರಲಿಲ್ಲ. ಆದರೆ ಅವರು ಅತಿ ಶೀಘ್ರವಾಗಿ ಬರೆದುಕೊಳ್ಳುತ್ತಿದ್ದರು. ಕೆಲವು ಪದಗಳನ್ನು ಚಿಕ್ಕದಾಗಿ ಮಾಡಿದರೂ, ಬಾಪುವಿನ ಬಾಯಿಂದ ಬಂದ ಯಾವ ಶಬ್ದವನ್ನೂ ಬಿಡುತ್ತಿರಲಿಲ್ಲ. ಒಂದು ಸಾರಿ ಬಾಪು ಜೊತೆ ಮಾತನಾಡಲು ಅಮೆರಿಕದಿಂದ ಮಿತ್ರರು ಬಂದಿದ್ದರು. ಕಾಕಾ ಆ ಮಾತುಕತೆಯ ಬಗ್ಗೆ, ತನ್ನ ಶೈಲಿಯಲ್ಲಿ ಬರೆದುಕೊಂಡರು. ಅಮೆರಿಕದ ಮಿತ್ರರಲ್ಲಿ ಒಬ್ಬಾಕೆ ಶೀಘ್ರಲಿಪಿಯಲ್ಲಿ ಅದನ್ನೆಲ್ಲ ಬರೆದುಕೊಂಡಿದ್ದಳು. ಮರುದಿನ ಆಕೆ ಕಾಕಾರೊಡನೆ ತನ್ನ ಬರಹವನ್ನು ಹೋಲಿಸಿ ನೋಡುವಾಗ ಹೇಳಿದಳು: "ನೀವು ನನ್ನನ್ನು ಅನಾಮತ್ ಸೋಲಿಸಿದ್ದೀರಿ" ಎಂದಳು.

ಬಾಪುವಿನ ಭಾಷಣಗಳನ್ನು ಬರೆದುಕೊಳ್ಳುವಾಗ, ಅವರು ಹೇಳಿದ್ದಷ್ಟನ್ನೇ ಬರೆದುಕೊಂಡರೆ ಆಗುತ್ತಿರಲಿಲ್ಲ. ಬಾಪು ಭಾಷಣ ಪೂರ್ವರಚಿತವಲ್ಲ ಅದು ಸಹಜವಾಗಿರುತ್ತಿತ್ತು. ಮಾತುಗಳ ನಡುವೆ ಸರಣಿ ಇರುತ್ತಿರಲಿಲ್ಲ, ಮಾತು ತುಂಡು ತುಂಡಾಗಿರುತ್ತಿತ್ತು. ಭಾಷಣದ ವರದಿ ಮಾಡುವಾಗ ಕಾಕಾ ಅದನ್ನೆಲ್ಲಾ ಕ್ರೋಢೀಕರಿಸಿ, ಕ್ರಮಬದ್ಧವಾಗಿ ಬರೆಯುತ್ತಿದ್ದರು. ಒಮ್ಮೆ ಫೈಜಾಪುರದಲ್ಲಿ ಕಾಂಗ್ರೆಸ್ ಸಮ್ಮೇಳನ ನಡೆದಾಗ ಬಾಪುವಿನ ಹಿಂದಿ ಭಾಷಣವನ್ನು ನೇರವಾಗಿ ಇಂಗ್ಲಿಷ್ ಟೆಲಿಗ್ರಾಂ ಪತ್ರದ ಮೇಲೆಯೇ ಕಾಕಾ ಬರೆದು ಕಳುಹಿಸಿದ್ದರು. ಸಭೆ ಮುಗಿಯುತ್ತಿದ್ದಂತೆಯೇ ಅವುಗಳು ಪತ್ರಿಕೆಗಳಲ್ಲಿ ಪ್ರಕಟನೆಗೆ ಕಳುಹಿಸಲೆಂದು ಹಾಗೆ ಮಾಡಿದ್ದರು.

ಕೆಲವು ಸಲ ಬಾಪುವಿನ ಸಂಗಡಿಗರು, ಅವರು ಭಾಷಣದಲ್ಲಿ ಏನು ಹೇಳಿದರು ಎಂದು ಸ್ಪಷ್ಟವಾಗಿ ಅರ್ಥವಾಗದೆ "ಮಹದೇವ ಭಾಯಿಯ ವರದಿ ಬರಲಿ, ಆಗ ಅದನ್ನು ಓದಿಕೊಳ್ಳೋಣ" ಎಂದು ಸಮಾಧಾನಪಟ್ಟುಕೊಳ್ಳುತ್ತಿದ್ದರು.

ಒಮ್ಮೆ ಪಂಜಾಬಿನಿಂದ ಸೋದರರು ಬಾಪುವನ್ನು ನೋಡಲೆಂದು ಬಂದಿದ್ದರು. ಕಾಕಾ ಅವರನ್ನು ಭೇಟಿಮಾಡಿ ಮಾತನಾಡಿದನಂತರ "ಇನ್ನು ನೀವು ಬಾಪುವನ್ನು ನೋಡುವ ಅವಶ್ಯಕತೆ ಇಲ್ಲ" ಎಂದು ಹೇಳಿ ಕಳುಹಿಸಿದರು. ಆದರೆ ಆ ಸೋದರರಿಗೆ ಸಮಾಧಾನವಾಗಲಿಲ್ಲ. ಮತ್ತೊಮ್ಮೆ ಬಂದು ಕಾಕಾರೊಡನೆ ಚರ್ಚೆಮಾಡಿ, ಹೋಗುವಾಗ ಆಶ್ರಮದವರೊಬ್ಬರೊಡನೆ "ಆ ಮಹಾದೇವ ಭಾಯಿಯನ್ನು ಗುಂಡಿಟ್ಟುಕೊಂದು ಬಿಡುತ್ತೇನೆ" ಎಂದು ಬೈಯುತ್ತಾ ಹೋದ. ಇದನ್ನು ಕೇಳಿ ನನ್ನ ತಾಯಿ ಗಾಬರಿಯಾದರು. ಆದರೆ ತಂದೆ ಕೇಕೆ ಹೊಡೆದು ನಕ್ಕುಬಿಟ್ಟರು.

ಒಮ್ಮೆ ಬಾಪು ಮತ್ತು ಕಾಕಾ ನಡುವಿನ ಏಕಾತ್ಮತೆಯ ಅಸಾಧಾರಣ ಘಟನೆ ನಡೆಯಿತು. ಬಾಪು ತಮ್ಮ ಕುಟೀರದ ಮುಂದೆ ನಿಂತುಕೊಂಡು ಕಾಕಾರೊಡನೆ ಏನೋ ಮಾತನಾಡುತ್ತಿದ್ದರು. ಧಿಡೀರನೆ ಅವರಿಗೆ ಏನೋ ಬರೆಸಬೇಕೆನಿಸಿತು. 'ಮಹದೇವ್ ಬರೆದುಕೋ' ಎಂದು ಹೇಳುತ್ತಾ ಹೋದರು. ಕಾಕಾ ನಿಂತುಕೊಂಡೇ ಬರೆದುಕೊಂಡರು. ನಾನು ಅವರ ಪಕ್ಕದಲ್ಲಿ ನಿಂತು ನೋಡುತ್ತಿದ್ದೆ. ಬಾಪು ಹೇಳುವ ಮುನ್ನವೇ, ಅವರೇನು ಹೇಳುವರೆಂದು ಊಹಿಸಿ ಬರೆದುಬಿಡುತ್ತಿದ್ದರು. ಬಾಪು ಪ್ರಯೋಗಿಸಿದ ಒಂದು ಶಬ್ದ ಕಾಕಾ ಬಳಿಸಿದ್ದ ಶಬ್ದವಲ್ಲದೆ ಬೇರೆಯದಾಗಿತ್ತು. ಕಾಕಾನನ್ನು ನಡುವೆ ತಡೆದು ಹೇಳಿದರು. "ಬಾಪು ಸ್ವಲ್ಪ ಇರಿ. ಈ ಸ್ಥಳದಲ್ಲಿ ನಾನು ಈ ಬೇರೆಯ ಪದವನ್ನು ಉಪಯೋಗಿಸಿದ್ದೇನೆ. ನೀವು ಹೇಗೆ ಈ ಸಂದರ್ಭದಲ್ಲಿ ಬೇರೆಯ ಪದವನ್ನು ಬಳಸುವಿರಿ?" ಬಾಪು ಒಂದು ಕ್ಷಣ ವಿಸ್ಮಯಗೊಂಡರು. ಶಬ್ದಗಳ ಪ್ರಯೋಗದ ಬಗ್ಗೆ ಅವರದೂ ಖಚಿತ ಅಭಿಪ್ರಾಯಗಳಿರುತ್ತಿದ್ದವು.

"ಮಹದೇವ್, ನೀನು ಆ ಶಬ್ದ ಬರೆದಿದ್ದಾದರೂ ಹೇಗೆ? ನಾನು ನಿನಗೆ ಹೇಳಿದ ಶಬ್ದವೇ ಬೇರೆ ಆಗಿತ್ತಲ್ಲ" ಎಂದು ಬಾಪು ಕೇಳಿದರು. ಪತ್ರ ಬರೆಯಲು ಹಿಡಿದ ಸಮಯಕ್ಕಿಂತ ಅಧಿಕ ಸಮಯ ಬಾಪುವಿನ ಭಾಷೆಯಲ್ಲಿ "ಯಾವ ಶಬ್ದ ಹೆಚ್ಚು ಸೂಕ್ತ" ಎನ್ನುವ ಚರ್ಚೆಗೆ ವ್ಯಯವಾಯಿತು. ಆದರೆ ಮಹಾದೇವ ಪ್ರಯೋಗಿಸಿದ ಶಬ್ದವೂ ಸರಿ ಎಂದು ಬಾಪು ಒಪ್ಪಿಕೊಂಡ ನಂತರವೇ ವಾದ ಇತ್ಯರ್ಥವಾದದ್ದು.

ಹರಿಜನ ಪತ್ರಿಕೆಯ ಸಂಪಾದಕರಾಗಿದ್ದ ಶ್ರೀ ಕಿಶೋರಿಲಾಲ್ ಮಶ್ರುವಾಲಾ ಅವರು ಮಹದೇವದೇಸಾಯಿ ಅವರನ್ನು ಹೀಗೆ ವರ್ಣಿಸಿದ್ದಾರೆ:

"ಮಹಾ ವಿದ್ವಾಂಸ, ದಾರ್ಶನಿಕ, ಶ್ರೇಷ್ಠ ಲೇಖಕ, ಕವಿ, ಗಾಯಕ, ಕಲಾವಿದ! ಇಷ್ಟಾದರೂ ತನ್ನ ಸ್ವಾಮಿಯ, ತನ್ನ ಸತಿಯ, ಸ್ನೇಹಿತರ, ಸೇವಕರ, ಯಾರದೇ ಆಗಲಿ ಕಕ್ಕಸು ತೊಳೆಯಲು ಸಿದ್ಧನಾದ, ಮನೆ ಗುಡಿಸಲು, ಬಟ್ಟೆ ಒಗೆಯಲು ಅಣಿಯಾದ, ರೋಗಿಗಳ ಪಾಲಿಗೆ ದಾದಿಯಾದ, ಅಗಸನಾದ, ಅಡಿಗೆ ಭಟ್ಟನಾದ, ಮುದ್ದಾಗಿ ಬರೆದು ಪ್ರತಿ ಮಾಡಬಲ್ಲ ಗುಮಾಸ್ತೆಯಾದ, ಬರೆದು ಬಂದ ಪ್ರಬಂಧಗಳನ್ನು ತಿದ್ದುವ ಅಧ್ಯಾಪಕನಾದ, ಮುಗಿಸಿದ ಕೆಲಸಕ್ಕೆ ಮುಕ್ತಾಯ ಕೊಡಬಲ್ಲ ಸಹಚರಿಯಾದ, ನಿಮ್ಮ ಮನಸ್ಸನ್ನು ಹೊಕ್ಕು ಆಲೋಚನ ಪಥ ಹಿಡಿದು ಅರ್ಥಮಾಡಿಕೊಂಡು ಅದನ್ನೆಲ್ಲ ಬರೆದಿಡಬಲ್ಲ ಸಮರ್ಥ; ನಿಮ್ಮ ಪರವಾಗಿ ರಾಯಭಾರಿಯಾಗಿ ಹೋಗಿ ತೀರ ನಾಜೂಕಿನ ಕೆಲಸಗಳನ್ನು ಮಹಾನ್ ಚಾತುರ್ಯದಿಂದ ನಿರ್ವಹಿಸಬಲ್ಲ ತಂತ್ರಕೋವಿದ, ನಿಮ್ಮ ವಕಾಲತ್ತು ವಹಿಸಿ ನಿಮ್ಮ ವಾದವೇನೆಂಬುದನ್ನು ಚೆನ್ನಾಗಿ ಗ್ರಹಿಸಿ ನಿಮಗಾಗಿ ಹೊಡೆದಾಡಬಲ್ಲ ವಕೀಲ, ನಿಮ್ಮ ಮತ್ತು ನಿಮ್ಮ ಯಜಮಾನರ ಮಧ್ಯೆ ಕಿರಿಕಿರಿ ಉಂಟಾಯಿತೆನ್ನಿ, ಯಜಮಾನರು ನಿಮ್ಮ ವಿಷಯವಾಗಿ ಅಕಾರಣ ಅಪನಂಬಿಕೆಗಳನ್ನು ಬೆಳೆಸಿಕೊಂಡಿದ್ದಾರೆನ್ನಿ, ಅವುಗಳನ್ನೆಲ್ಲಾ ತೃಪ್ತಿಕರವಾಗಿ ಪರಿಹರಿಸಬಲ್ಲ ಪಂಚಾಯಿತ 'ಸಮತೂಕ'ಕ್ಕಾತ, ಎತ್ತಿದ ಕೈ, ಏಕಕಾಲದಲ್ಲಿ ಪಿತೃಭಕ್ತಿ, ಸ್ವಾಮಿಭಕ್ತಿ, ಮಿತ್ರಭಕ್ತಿ, ಪತ್ನಿಪ್ರೇಮ, ಪುತ್ರ ವಾತ್ಸಲ್ಯ-ಎಲ್ಲವನ್ನೂ ಪಾಲಿಸಬಲ್ಲ ಸತ್ಯಶಕ್ತ ಸಹಚರಿಗಳು ಯಾರಾದರೂ ಕಷ್ಟಕ್ಕೆ ಸಿಕ್ಕಿದರೋ ಅವರ ಹೃದಯಕ್ಕೆ ಶಾಂತಿ ಕೊಡಬಲ್ಲವ; ಅವರ ಕಷ್ಟ ಪರಿಹರಿಸಬಲ್ಲವ ಯಾರೀ ಮಹಾಪುರುಷ? ಮತ್ತೆ ಯಾರೂ ಅಲ್ಲ ಮಹದೇವದೇಸಾಯಿ!.

1940ರ ಫೆಬ್ರವರಿಯಲ್ಲಿ ಗಾಂಧಿ ಅವರ ಮಿತ್ರರಾದ ಸಿ. ಎಫ್. ಆಂಡ್ರೂಸ್ ಕಲ್ಕತ್ತೆಯಲ್ಲಿ ಅಸ್ವಸ್ಥರಾಗಿ ಹಾಸಿಗೆ ಹಿಡಿದಿದ್ದರು. ಅವರ ಜೊತೆ ಆಸ್ಪತ್ರೆಯಲ್ಲಿರಲು ಗಾಂಧೀಜಿ ಮಹದೇವದೇಸಾಯಿ ಅವರನ್ನು ಗೊತ್ತುಪಡಿಸಿದರು ಆದಾಗ್ಯೂ ಅನಾರೋಗ್ಯ ಉಲ್ಬಣಿಸಿ ಏಪ್ರಿಲ್ 5ರಂದು ಆಂಡ್ರೂಸ್ ನಿಧನ ಹೊಂದಿದರು.

# ಕೊನೆಯ ದಿನಗಳು

ಗಾಂಧಿ ಅವರ 'ಐದನೆಯ ಪುತ್ರ' ಎಂದು ಪರಿಗಣಿಸಲ್ಪಟ್ಟಿದ್ದ ಜಮ್ನಲಾಲ್ ಬಜಾಜರು 1942ರ ಫೆಬ್ರವರಿ 11ರಂದು ವಾರ್ಧಾದಲ್ಲಿ ಪಾರ್ಶ್ವವಾಯುವಿನಿಂದ ನಿಧನರಾದರು. ಅವರು ನಿಧನರಾದ ಕೆಲವು ದಿವಸಗಳನಂತರ ಬಿಡುವಿಲ್ಲದ ಕೆಲಸಗಳಿಂದ ಮಹದೇವದೇಸಾಯಿ ಅತಿಯಾಗಿ ಬಳಲಿದ್ದರು. 'ಕ್ವಿಟ್ ಇಂಡಿಯಾ' ಆಂದೋಲನದ ಡಮರುಗ ಬಾರಿಸಿಯಾಗಿತ್ತು. 'ಸ್ವಲ್ಪ ದಿನಗಳ ಮಟ್ಟಿಗೆ ಮಹದೇವದೇಸಾಯಿ ಎಲ್ಲಿಗಾದರೂ ಹೋಗಿ ವಿಶ್ರಾಂತಿ ಪಡೆಯಲಿ' ಎಂದು ಗಾಂಧೀಜಿ ಹೇಳಿದ್ದರು. ಘನಶ್ಯಾಮದಾಸ ಬಿರ್ಲಾ ಮಹದೇವದೇಸಾಯಿಯನ್ನು ಒಂದು ವಾರದ ವಿಶ್ರಾಂತಿಗೆ ತಮ್ಮೊಡನೆ ನಾಸಿಕ್‌ಗೆ ಕರೆದೊಯ್ಯಲು ತಯಾರಾದರು. ಆದರೆ ಮಹದೇವದೇಸಾಯಿಗೆ ತಲೆ ಸುತ್ತು ಬಂದು ವಾರ್ಧಾದಲ್ಲೇ ಉಳಿದರು. ಆ ವಾರ್ತೆ ಗಾಂಧೀಜಿಗೆ ದೂರವಾಣಿ ಮೂಲಕ ತಿಳಿಯಿತು. 'ಅವರನ್ನು ಒಡನೆಯೇ ಸೇವಾಗ್ರಾಮಕ್ಕೆ ವಾಪಸ್ ಕರೆತಂದುಬಿಡಿ', ಎಂದು ಗಾಂಧೀಜಿ ಸಂದೇಶ ಕಳುಹಿಸಿದರು. ತಕ್ಷಣ ಅವರನ್ನು ಸರಕಾರಿ ವೈದ್ಯರಿಗೆ ತೋರಿಸಲಾಯಿತು. ಬಾಪು ಬಹಳ ದುಃಖ ಪಟ್ಟರು. ಅಂದು ಭಾನುವಾರವಾಗಿತ್ತು. ಸಾಧಾರಣವಾಗಿ ಬಾಪು ಭಾನುವಾರ ಸಂಜೆ ಮೌನ ಪ್ರಾರಂಭಿಸಿ ಸೋಮವಾರ ಸಂಜೆಗೆ ಮುರಿಯುತ್ತಿದ್ದರು. ಅಂದು ಮೌನವಿದ್ದುದರಿಂದ ಬಾಪು ತಮ್ಮ ಕೋಣೆಯಿಂದ ಪದೇ ಪದೇ ಟೆಲಿಫೋನ್ ಇದ್ದ ಚಿಕ್ಕ ಕೋಣೆಗೆ ಹೋಗಿ ಮಹದೇವ ಹೇಗಿದ್ದಾರೆಂದು ದೂರವಾಣಿ ಮೂಲಕ ವಿಚಾರಿಸಿ ಸೂಚನೆಗಳನ್ನು ನೀಡುತ್ತಿದ್ದರು. ಕೊನೆಗೆ ಮಹದೇವನನ್ನು ಕಾರಿನಲ್ಲಿ ಅವರ ಮನೆಗೆ ಕರೆ ತಂದರು. ದುರ್ಗಾ ಬೆಹನ್ ಹಾಸಿಗೆ ಸಿದ್ಧಪಡಿಸಿದ್ದಳು. ಬಾಪು ಅಲ್ಲಿಗೆ ಓಡಿಬಂದರು. ಬಾಪು ಮಹದೇವನ ತಲೆಯನ್ನು ತಮ್ಮ ಮಡಿಲಲ್ಲಿಟ್ಟುಕೊಂಡು 'ಮಹದೇವ್ ಈಗ ಹೇಗಿದ್ದೀಯ' ಎಂದು ಕೇಳಲಾರಂಭಿಸಿದರು. ಇದಕ್ಕೆ ಅಂದು ಎರಡನೆಯ ಬಾರಿಗೆ ಮೌನ ಮುರಿದಿದ್ದರು. ಮುಂಚೆ ಮಗನ್‌ಲಾಲ್ 1928ರ ಏಪ್ರಿಲ್ 23 ಸೋಮವಾರದಂದು ತೀರಿಕೊಂಡಾಗ ಬಾಪು ತಮ್ಮ ಮೌನ ವ್ರತವನ್ನು ಮುರಿದಿದ್ದರು.

ಆ ವೇಳೆಗೆ ಮಹದೇವನ ಆರೋಗ್ಯ ಸುಧಾರಿಸಿತ್ತು. "ಈಗ ನನ್ನ ಇಚ್ಛೆ ಪೂರೈಸಿತು. ಸ್ಟೇಷನ್ನಿನಲ್ಲಿದ್ದಾಗ ನಾನು ಹೋಗಿಯೇ ಬಿಡುತ್ತೇನೆ ಎನಿಸುತ್ತಿತ್ತು. . ಅದಕ್ಕೇ ನಾಸಿಕ್‌ಗೆ ನಾನು ಹೋಗುವುದಿಲ್ಲ, ಆಸ್ಪತ್ರೆಗೂ ಹೋಗುವುದಿಲ್ಲ ಎಂದು ಹಠಹಿಡಿದೆ. ಸಾಯುವುದಾದರೆ ನಾನು ಬಾಪುವಿನ ಮಡಿಲಲ್ಲಿ ತಲೆ ಇಟ್ಟು ಪ್ರಾಣ ಬಿಡುತ್ತೇನೆ ಎಂದು ಹೇಳಿದ್ದೆ. ಆದರೂ ವೈದ್ಯರ ಬಳಿ ಕರೆದೊಯ್ದರು" ಎಂದು ಮಹದೇವದೇಸಾಯಿ ಹೇಳಿದರು[12].

ಸ್ವಾತಂತ್ರ್ಯ ಸಂಗ್ರಾಮದ ಅಂತಿಮಘಟ್ಟವಾದ 'ಕ್ವಿಟ್ ಇಂಡಿಯಾ' ಚಳವಳಿ ಮುಂಬಯಿಯಲ್ಲಿ 1942ರ ಜುಲೈನಲ್ಲಿ ಪ್ರಚಂಡ ಜ್ವಾಲೆಯಾಗಿ ಉರಿಯುತ್ತಿತ್ತು. ಆ ಸಮಯದಲ್ಲಿ ಮಹದೇವದೇಸಾಯಿ ಅವರ ಕೆಲಸ ಮತ್ತಷ್ಟು ಹೆಚ್ಚಾಯಿತು. ಸಂದರ್ಶನಕ್ಕೆ ಬರುವ ಜನರ ಹಿಂಡು ಸದಾ ಇರುತ್ತಿತ್ತು. ಪತ್ರ ವ್ಯವಹಾರದ ರಾಶಿ ಬೆಳೆಯುತ್ತಲೇ ಇತ್ತು. ಲೇಖನಗಳನ್ನು ಬರೆಯುವ ಕೆಲಸವೂ ಹೆಚ್ಚಾಯಿತು. ಇಷ್ಟಕ್ಕೂ ಮೇಲಾಗಿ ಗಾಂಧೀಜಿ "ಈ ಸಲದ ಸೆರೆಮನೆವಾಸ ಬೇರೆಯ ರೀತಿಯದೇ ಇರುತ್ತದೆ. ಸೆರೆಮನೆ ಸೇರಿದೊಡನೆ ಊಟ ನೀರೂ ಬಿಟ್ಟುಬಿಡೋಣ ಎಂದಿದ್ದೇನೆ" ಎಂದರು. ಇದರಿಂದ ಮಹದೇವದೇಸಾಯಿ ಬಹಳ ಚಿಂತೆಗೀಡಾದರು. ಸೆರೆಮನೆಗೆ ಹೋಗುತ್ತಲೇ ಉಪವಾಸ ಮಾಡುವ ತೀರ್ಮಾನ ಕೈಗೊಂಡಿರುವ ಗಾಂಧೀಜಿಯ ಮಾತು ಅವರಿಗೆ ಕೊಂಚವೂ ಹಿಡಿಸಲಿಲ್ಲ. ಅವರು ಈ ವಿಷಯ ಕುರಿತು ಸೇವಾಗ್ರಾಮದಲ್ಲಿದ್ದುಕೊಂಡೇ ಗಾಂಧಿಯವರೊಡನೆ ಪತ್ರ ವ್ಯವಹಾರ ಆರಂಭಿಸಿದರು.

1942ರ ಆಗಸ್ಟ್ ಒಂಬತ್ತರ ಬೆಳಗ್ಗೆ ದೇಶದ ಮಹಾನ್ ನಾಯಕ ಗಾಂಧೀಜಿಯನ್ನೂ ಆಗತಾನೇ ಆರೋಗ್ಯ ಸುಧಾರಿಸಿ ಚೇತರಿಸಿಕೊಂಡಿದ್ದ ಕಸ್ತೂರಬಾ, ಮೀರಾ ಬಹನ್, ಸರೋಜಿನಿ ನಾಯಿಡು ಸುಶೀಲಾ ನಯ್ಯಾರ್ ಮತ್ತು ಮಹದೇವದೇಸಾಯಿ ಅವರನ್ನೂ ಸೆರೆ ಹಿಡಿದು ಪೂನಾದ ಹೊರಭಾಗದಲ್ಲಿರುವ ಅಗಾಖಾನರ ಅರಮನೆಯಲ್ಲಿ ಗೃಹ ಬಂಧನದಲ್ಲಿಡಲಾಯಿತು. 1892ರಲ್ಲಿ ಸುಲ್ತಾನ್ ಮಹಮದ್ ಶಾ ಆಗಾಖಾನ್ ನಿರ್ಮಿಸಿದ್ದ ಆ ಅರಮನೆ ಗಾಂಧೀಜಿಯ ವಿಶೇಷ ಬಂದೀಖಾನೆಯಾಯಿತು.

ಹೆಸರಿಗಷ್ಟೇ ಅರಮನೆಯಾಗಿದ್ದ ಆ ಸುಂದರ ಕಟ್ಟಡವನ್ನು ಬ್ರಿಟಿಷ್ ಸರಕಾರ 1939ರಲ್ಲಿ ಪ್ರಾರಂಭವಾದ ಎರಡನೇ ಮಹಾಯುದ್ಧದ ಕೆಲಸ ಕಾರ್ಯಗಳಿಗಾಗಿ ವಶಕ್ಕೆ ತೆಗೆದುಕೊಂಡು ಗೋದಾಮು ಮಾಡಿಕೊಂಡಿದ್ದರು. ಶುಚಿಯೆನ್ನುವುದೇ ಇರಲಿಲ್ಲ. ಅನೇಕ ದಿನಗಳಿಂದ ಯಾರೂ ವಾಸಿಸದ ಈ ಅರಮನೆ ಇವರ ಪಾಲಿಗೆ ಭೂತ ಬಂಗಲೆಯಾಗಿತ್ತು[13]. ಸುಮಾರು 70 ಕೊಠಡಿಗಳಿದ್ದ ಆ ದೊಡ್ಡ ಮಹಲಿನಲ್ಲಿ ಒಂದು ಭಾಗವನ್ನು ತೆರವು ಮಾಡಿ ಮಹಾತ್ಮರ ಪರಿವಾರಕ್ಕೆ ಸೆರೆಮನೆಯನ್ನಾಗಿ ಪರಿವರ್ತನೆ ಮಾಡಿತ್ತು. ಅಲ್ಲಿ ವರ್ತಮಾನ ಪತ್ರಿಕೆಗಳನ್ನು ಓದುವಂತಿರಲಿಲ್ಲ. ಬಾಯಿ ತಪ್ಪಿಯೂ ಸಹ ಹೊರಗಿನ ಪ್ರಪಂಚದ ವಿಚಾರವಾಗಿ ಮಾತನಾಡುವಂತಿರಲಿಲ್ಲ. ಸುತ್ತಲೂ ವಿಶಾಲವಾದ ತೋಟ. ಎತ್ತರವಾದ ಮರಗಳಿದ್ದ ಕಾರಣ ಅರಮನೆಯ ಆವರಣದಲ್ಲಿ ಹೊರಗಿನ ನೋಟ ಕಾಣಿಸುತ್ತಿರಲಿಲ್ಲ. ಅನೇಕ ತಿಂಗಳು ಬಾ ಮತ್ತು ಮಹಾತ್ಮರನ್ನು ಎಲ್ಲಿ ಬಂಧಿಸಿದ್ದಾರೆ ಎಂಬ ಸುಳಿವೂ ಸಿಗಲಿಲ್ಲ. ಕೆಲ ದಿವಸಗಳ ನಂತರ ಹರಿಲಾಲನ ಕಿರಿಯ ಪುತ್ರಿಯಾದ ಮನು ಗಾಂಧಿಯನ್ನು ಸೇವಾಗ್ರಾಮದಲ್ಲಿ ಬಂಧಿಸಿ ಈ ಸ್ಥಳಕ್ಕೆ ಕಳುಹಿಸಲಾಯಿತು. ಇವರೆಲ್ಲರಿಗಾಗಿ 24 ಗಂಟೆಗಳ ಕಾಲ ಕಾವಲಾಗಿ ಪೋಲಿಸ್ ಸೂಪರಿಂಟೆಂಡೆಂಟ್ ಕೆಟಲಿ. ಕರ್ನಲ್ ಭಂಡಾರಿ, ಮಿಲಿಟರಿ ಅಧಿಕಾರಿ ಹಾಗೂ ಸೆರೆಮನೆ ವೈದ್ಯರು ಇದ್ದರು.

## ನಿಧನ

1942ರ ಆಗಸ್ಟ್ 14ರಂದು ಮಧ್ಯರಾತ್ರಿಯವರೆಗೆ ನಾಡಿನ ಗಂಭೀರ ಪರಿಸ್ಥಿತಿಯನ್ನು ಮಹಾಯುದ್ಧದ ಜ್ವಾಲೆಯಲ್ಲಿ ಕಮರಿ ಹೋಗುತ್ತಿದ್ದ ಜಗತ್ತಿನ ಸಂಕಟವನ್ನೂ ಭಾರತೀಯ ದಾಸ್ಯ ಶೃಂಖಲೆಗಳ ಪರಿತಾಪವನ್ನು ಗಾಂಧೀಜಿ ಮಹದೇವದೇಸಾಯಿಯೊಡನೆ ಚರ್ಚಿಸಿ ಕೊಠಡಿ ನಿರ್ಗಮಿಸಿದರು. ಮರು ದಿವಸ ಆಗಸ್ಟ್ 15 ಶನಿವಾರದಂದು ಬೆಳಗ್ಗೆ ಮಹದೇವದೇಸಾಯಿ ಸೂರ್ಯೋದಯಕ್ಕಿಂತ ಮೊದಲೇ ಎದ್ದರು. ಅವರ ಕೊನೆಯ ಕ್ಷಣಗಳು ಮುಗಿಯುತ್ತಿದ್ದವು. ಕಾಲ ಚಕ್ರ ನಿರಂತರವಾಗಿ ತಿರುಗುತ್ತಿತ್ತು. ಪ್ರಾರ್ಥನೆ

ಮಾಡಿದರು. ಬಾಪೂಜಿಗಾಗಿ ಮೊಸಂಬಿ ರಸ ಸಿದ್ಧಪಡಿಸಿದರು. ಸರೋಜಿನಿ ನಾಯುಡು ಮುಂತಾದವರಿಗೆ ಚಹಾ ಮಾಡಿಕೊಟ್ಟರು. ಎಲ್ಲಾ ಕೆಲಸಗಳು ಮುಗಿದ ನಂತರ ಭಾರತದ ವೈಸ್ರಾಯ್‌ಲಿನ್‌ಲಿಥ್‌ಗೋ ಅವರಿಗೆ ಗಾಂಧಿ ಬರೆದ ಪತ್ರವನ್ನು ಪರಿಷ್ಕರಿಸಿದರು. ಆ ಪತ್ರವನ್ನು ಟೈಪ್ ಮಾಡಿದ ನಂತರ ಹಠಾತ್ತನೆ ಇದ್ದಕ್ಕಿದ್ದಂತೆ ತಲೆ ತಿರುಗಿ ಕುಸಿದು ಬಿದ್ದರು. ಪಕ್ಕದ ಕೊಠಡಿಯಲ್ಲಿದ್ದ ಕಸ್ತೂರಬಾ ಓಡೋಡಿ ಬಂದು ಪಕ್ಕದಲ್ಲಿದ್ದ ಮಂಚದ ಮೇಲೆ ಮಲಗಿಸಿದರು. ಡಾ. ಸುಶೀಲಾ ನಯ್ಯಾರ್ ಮತ್ತು ಸೆರೆಮನೆಯ ವೈದ್ಯರು ಆಗಮಿಸಿ ಮಹದೇವ್ ಅವರ ಎದೆಯನ್ನು ಒತ್ತಿ ಒತ್ತಿ ಉಸಿರಾಡಲು ಅಗಾಧ ಪರಿಶ್ರಮ ಪಟ್ಟರು. ಅಷ್ಟರಲ್ಲೇ ಗಾಂಧೀಜಿ ಓಡಿ ಬಂದು 'ಮಹದೇವ್, ಮಹದೇವ್' ಎಂದು ಕೂಗಿದರು. ಆ ವೇಳೆಗೆ ಹೃದಯಾಘಾತದಿಂದ ಕಣ್ಮುಚ್ಚಿದ್ದರು. ಪ್ರಾಣ ಮಾತ್ರ ಬಾಪೂಜಿ ಬರಲೆಂದು ಕಾಯುತ್ತಿತ್ತು. ಪ್ರಾಣಪಕ್ಷಿ ಹಾರಿ ಹೋಯಿತು. "ನನ್ನ ಪತಿ ಎಡಗೈ-ಬಲಗೈ ಎರಡನ್ನೂ ಕಳೆದುಕೊಂಡರು" ಎಂದು ಕಸ್ತೂರಬಾ ಶೋಕಿಸಿದರು. ಆಗ ಮಹದೇವದೇಸಾಯಿ ಅವರ ವಯಸ್ಸು ಕೇವಲ 50. ಸಾಯುವ ವಯಸ್ಸೇನಲ್ಲ. ಎಲ್ಲವೂ ಆ ನೀರವ ನಿರ್ಜನ ಅರಮನೆಯ ಸೆರೆಮನೆಯೊಳಗೆ ಗಂಭೀರ ಮೌನದಲ್ಲಿ ಲೀನವಾಯಿತು. ಸ್ಥಿರಪ್ರಜ್ಞರಾಗಿ ಜೀವನದ ಪ್ರಚಂಡ ಬಿರುಗಾಳಿಗಳನ್ನೆಲ್ಲಾ ಎದುರಿಸಿ ನಿಂತ ಗಾಂಧೀಜಿ, ಮಹದೇವದೇಸಾಯಿಯ ಅಗಲಿಕೆಯನ್ನು ಸಹಿಸಲಾರದೆ ಗಳಗಳನೆ ಅತ್ತುಬಿಟ್ಟರು.

ಅವರ ಹೃದಯ ಬಿರಿದಿತ್ತು. ನಡಗುತ್ತಿದ್ದ ಕೈಗಳಿಂದ ಬಾಪು ಮತ್ತು ಸುಶೀಲ ಆ ನಿರ್ಜೀವ ಶರೀರಕ್ಕೆ ಸ್ನಾನ ಮಾಡಿಸಿದರು. ಗಂಧ ಹಚ್ಚಿ ಪುಷ್ಪಗಳನ್ನಿಟ್ಟರು. ಗೀತಾ ಪಾಠ ಪಠಿಸಿದರು. 'ಮಹದೇವ್ ಈ ಕಾರ್ಯವನ್ನು ನೀನು ನನಗೆ ಮಾಡುತ್ತೀ ಎಂದು ಆಶಿಸಿದ್ದೆ; ಬದಲು ಈಗ ನಾನು ಮಾಡಬೇಕಾಗಿರುವುದು ನನ್ನ ದುರ್ದೈವ' ಎಂದು ಮೆಲುದನಿಯಲ್ಲಿ ಗಾಂಧೀಜಿ ನುಡಿದರು.

ಈ ಸುದ್ದಿ ಸಿಡಿಲು ಬಡಿದಂತೆ ದೇಶವನ್ನು ವ್ಯಾಪಿಸಿತು. ಸೆರೆಮನೆಯ ಅಧಿಕಾರಿಗಳು ರಹಸ್ಯವಾಗಿ ಶವಸಂಸ್ಕಾರ ಮಾಡಿಬಿಡಬೇಕೆಂದು ಒಂದು ಲಾರಿಯನ್ನೂ ಮತ್ತು ಪುಣೆಯಿಂದ ನಾಲ್ಕೈದು ಮಂದಿ ಪುರೋಹಿತರನ್ನು

ಕರೆತಂದಿದ್ದರು, ಬಾಪೂ ಕೆರಳಿ ನುಡಿದರು. "ಯಾವ ತಂದೆಯೂ ತನ್ನ ಮಗನ ಶವವನ್ನು ಅಪರಿಚಿತರ ಕೈಗೆ ಕೊಡಲಾರ. ಮಹದೇವ್ ನನ್ನ ಮಗನಿಗಿಂತ ಮಿಗಿಲಾದವನು. ಆತನ ಶವಸಂಸ್ಕಾರ ನಾನೇ ಮಾಡಬೇಕು. ನನ್ನನ್ನು ಹೊರಗೆ ಬಿಡಲು ಆಗದಿದ್ದರೆ ಇಲ್ಲೇ ಈ ಅಗಖಾನ್ ಅರಮನೆಯ ಆವರಣದೊಳಗೇ ಅವನ ಅಂತ್ಯಕ್ರಿಯೆ ನಡೆಸುತ್ತೇನೆ. ಈ ದಾರುಣ ದುಃಖ ಘಟನೆಯನ್ನು ನಾನು ರಾಜಕೀಯ ಸಮಸ್ಯೆಯನ್ನಾಗಿ ಮಾಡಬಯಸುವುದಿಲ್ಲ" ಸೆರೆಮನೆಯ ಅಧಿಕಾರಿಗಳು ಅವಕ್ಕಾದರು. ದೆಹಲಿಯ ವೈಸರಾಯರಿಗೆ ತಿಳಿಸಿ ಮಹದೇವರ ಮೃತ ದೇಹಕ್ಕೆ ಹೇಗೆ ಸಂಸ್ಕಾರ ನಡೆಸಬೇಕು ಎಂಬುದರ ಬಗ್ಗೆ ಪರವಾನಗಿಯನ್ನು ಪಡೆದರು. ಆಗಾಖಾನ್ ಅರಮನೆಯ ವಿಶಾಲವಾದ ಬಯಲಿನ ಒಂದು ಬದಿಯಲ್ಲಿ ಮಹದೇವರ ಪಾರ್ಥಿವ ದೇಹವನ್ನು ಅಗ್ನಿಗೆ ಸಮರ್ಪಣೆ ಮಾಡಬಹುದೆಂದು ಸರ್ಕಾರ ಅನುಮತಿ ಕೊಟ್ಟಿತು. ಗಾಂಧೀಜಿ ತಮ್ಮ ಕೈಯಿಂದ ಚಿತೆಗೆ ಅಗ್ನಿ ಸ್ಪರ್ಶ ಮಾಡಲು ನಿಶ್ಚಯಿಸಿದರು.

ಸಿದ್ಧತೆ ನಡೆಯಿತು. ದೇಹವನ್ನು ಚಿತೆಯಲ್ಲಿಟ್ಟ ಮೇಲೆ ವಾರ್ಧಾ ಆಶ್ರಮದಲ್ಲಿದ್ದ ಮಹದೇವದೇಸಾಯಿಯ ಪತ್ನಿ ದುರ್ಗಾಬೆಹೆನ್, ನಾರಾಯಣ ದೇಸಾಯಿ ಮತ್ತು ಸೇವಾಗ್ರಾಮ ಆಶ್ರಮದ ಮ್ಯಾನೇಜರ್ ಚಿಮನ್‌ಲಾಲ್‌ಷಾ ಅವರಿಗೆ ಗಾಂಧೀಜಿ "ಮಹದೇವ್ ಯೋಗಿಯಂತೆ ರಾಷ್ಟ್ರಸೇವೆಯಲ್ಲಿ ಬಲಿದಾನ ಮಾಡಿದ್ದಾನೆ. ಹಠಾತ್ತನೆ ನಮ್ಮನ್ನಗಲಿದ್ದಾನೆ. ಇಂಥ ಸಾವು ಅಪರೂಪ. ಆತನ ಸ್ಮರಣೆಗೆ ಅನುರೂಪವಾಗಿ ಬಾಳನ್ನು ನಡೆಸಿದ ಮಹದೇವನದು ಯೋಗಿಯ ಮರಣ. ದೇಶಭಕ್ತನ ಮರಣ. ದುರ್ಗಾಗೆ ಮತ್ತು ನಾರಾಯಣನಿಗೆ ಅಳಬಾರದು ಎಂದು ಹೇಳಿ. ಇಂಥ ಘನತರವಾದ ಮೃತ್ಯುವಿಗೆ ಸಂತೋಷಪಡಬೇಕು. ನನ್ನೆದುರೇ ಅಂತ್ಯಕ್ರಿಯೆ ನಡೆಯುತ್ತಿದೆ. ಚಿತಾಭಸ್ಮ ತೆಗೆದಿಡಲಾಗುವುದು. ದುರ್ಗಾಳಿಗೆ ಆಶ್ರಮದಲ್ಲೇ ಇರುವಂತೆ ಹೇಳಿ. ಆದರೆ ಅವಳಿಗೆ ಹೋಗಲೇಬೇಕೆನ್ನಿಸಿದರೆ ಆಕೆ ಬಂಧು ಬಳಗದವರಲ್ಲಿಗೆ ಹೋಗಬಹುದು. ಪುತ್ರ ನಾರಾಯಣ ಧೈರ್ಯಶಾಲಿ, ಮಹದೇವರ ಸ್ಥಾನವನ್ನು ಯೋಗ್ಯರೀತಿಯಲ್ಲಿ ಮುಂದುವರಿಸಲು ಸಿದ್ಧನಾಗುವನು ಎಂದು ಭಾವಿಸುತ್ತೇನೆ. ಪ್ರೀತಿಯಿಂದ, ಬಾಪು" ಎಂದು

ತಂತಿ ಕಳುಹಿಸಿದರು. ಈ ತಂತಿ ವಾರ್ತೆ ಮೂರುವಾರಗಳ ನಂತರ ಆಶ್ರಮ ತಲುಪಿತು. ಇದರೊಂದಿಗೆ, ಸರಕಾರದ ವತಿಯಿಂದ "ನಮ್ಮ ಕಚೇರಿಯ ತಪ್ಪಿನ ಕಾರಣ ಇದನ್ನು ಮುಟ್ಟಿಸುವಲ್ಲಿ ತಡವಾಯಿತು" ಎಂಬ ಸ್ಪಷ್ಟನೆ ಬರೆದಿತ್ತು. ಈ ಸ್ಪಷ್ಟನೆಯಿಂದ ನಾರಾಯಣ ದೇಸಾಯಿಗೆ ಕೋಪ ಬಂದಿತ್ತು.

ಅಂತಿಮ ಸಂಸ್ಕಾರವನ್ನು ನೋಡಲು ಸೆರೆಮನೆಯಲ್ಲೇ ಗಾಂಧಿ ಅವರ ಜೊತೆಯಲ್ಲಿ ಅನಾರೋಗ್ಯದಿಂದ ಇದ್ದ ಕಸ್ತೂರ ಬಾ ಪಟ್ಟು ಹಿಡಿದರು. ಕೈಲಾಗದಿದ್ದರೂ ಎಲ್ಲರ ಜೊತೆಯಲ್ಲಿ ಬಂದು ನಿಂತರು. ಒಂದು ಕೈಯಲ್ಲಿ ಬೆಂಕಿಯ ಮಡಕೆ, ಮತ್ತೊಂದು ಕೈಯಲ್ಲಿ ಕೋಲು ಹಿಡಿದು ಶವದ ಹಿಂದೆ ಹೊರಟ ಗಾಂಧೀಜಿ ಅಂತ್ಯಕ್ರಿಯೆಗಳಲ್ಲಿ ಭಾಗಿಯಾದರು. ಆತ್ಮೀಯರಾದ ನಾಲ್ಕೇ ಜನ ಅಲ್ಲಿ ಸೇರಿ ಪ್ರಾರ್ಥನೆ ಸಲ್ಲಿಸಿ ಚಿತೆಗೆ ಅಗ್ನಿಸ್ಪರ್ಶ ಮಾಡಿದ್ದರು. ದಹನ ಸಂಸ್ಕಾರ ವಿಧಿವತ್ತಾಗಿ ನಡೆಯಿತು. ಸಂಜೆ ಐದು ಗಂಟೆಯ ಸುಮಾರಿಗೆ ಎಲ್ಲವೂ ಮುಗಿದಿತ್ತು[14]. ಬಂಧನದಲ್ಲಿದ್ದ ಮಹದೇವದೇಸಾಯಿ ಅವರ ಆತ್ಮಬಲಿದಾನ ದೇಶದಲ್ಲಿಯೇ ಮೊದಲನೆಯದಾಗಿತ್ತು. ಅಂದು ಬೆಳಗ್ಗೆ ಲಂಡನ್ನಿನ ಆಕಾಶವಾಣಿ ಈ ಸುದ್ದಿ ಬಿತ್ತರಿಸಿತು. ನಾಡಿಗೆ ನಾಡೇ ದುಃಖತಪ್ತವಾಯಿತು. ಕ್ವಿಟ್ ಇಂಡಿಯಾ ಚಳವಳಿಗೆ ಈ ಬಲಿದಾನ ದೇಶಭಕ್ತಿಯ ಹೊಸ ವ್ಯಾಖ್ಯಾನ ಬರೆಯಿತು.

ಆನಂತರ ನಡೆದ ಶ್ರದ್ಧಾಂಜಲಿಯ ನುಡಿನಮನದಲ್ಲಿ ಗಾಂಧೀಜಿ ಹೀಗೆ ಹೇಳಿದರು "ಮಹದೇವ್ ಅಕಸ್ಮಾತ್ ಮೃತ್ಯುವಶರಾದರು. ಮೊದಲು ಏನೇನೂ ಸೂಚನೆಯೇ ಸಿಕ್ಕಲಿಲ್ಲ. ರಾತ್ರಿ ಚನ್ನಾಗಿಯೇ ನಿದ್ರೆ ಮಾಡಿದ್ದರು. ಬೆಳಗ್ಗೆ ಉಪಾಹಾರವನ್ನು ಮಾಡಿದ್ದರು. ನನ್ನೊಡನೆ ಅಡ್ಡಾಡಲಿಕ್ಕೆ ಬಂದಿದ್ದರು. ಡಾ. ಸುಶೀಲಾ ನಯ್ಯಾರ್ ಮತ್ತು ಸೆರೆಮನೆಯ ವೈದ್ಯರು ಸಾಧ್ಯವಿದ್ದುದನ್ನೆಲ್ಲಾ ಮಾಡಿದರು. ಆದರೆ ಭಗವಂತನ ಇಚ್ಛೆ ಬೇರೆಯದ್ದೇ ಆಗಿತ್ತು. ಮಹದೇವನ ಇಡೀ ಜೀವನ ಒಂದು ಭಕ್ತಿ ಗೀತೆ. ನನ್ನ ಶಿಷ್ಯನಾಗಿ ಬಂದವನು ಗುರುವಾದ. ದಿನವೂ ಆ ಸಮಾಧಿಯ ಬಳಿ ಪ್ರಾರ್ಥನೆ ಸಲ್ಲಿಸುತ್ತಿದ್ದೇನೆ. ಆತನ ಆಜೀವ ಪರ್ಯಂತದ ಸೇವಾದೀಕ್ಷೆಯನ್ನು ಸ್ಮರಿಸಿ ಆ ಆದರ್ಶದ ಸ್ಮರಣೆ ನನ್ನಲ್ಲಿ ಹಸಿರಾಗಿರುವಂತೆ ಶ್ರಮಿಸುತ್ತಿದ್ದೇನೆ.

ಮಹದೇವ್ 'ಮಾಡು ಅಥವ ಮಡಿ' ಎಂಬ ಕ್ರಾಂತಿಕಹಳೆಗೆ ಓಗೊಟ್ಟು ಬಲಿದಾನ ಮಾಡಿದ್ದಾನೆ. ಈ ಬಲಿದಾನದಿಂದ ಭಾರತದ ವಿಮೋಚನೆ ಇನ್ನಷ್ಟು ಹತ್ತಿರವಾಗಿದೆ. ಜಮ್ನಲಾಲ್, ಮಗನ್‌ಲಾಲ್, ಮಹದೇವ- ಇವರಲ್ಲಿ ಒಬ್ಬೊಬ್ಬರೂ ತಮ್ಮ ತಮ್ಮ ಕ್ಷೇತ್ರದಲ್ಲಿ ಅಸಾಧಾರಣ ವ್ಯಕ್ತಿಗಳು. ಅವರ ಸ್ಥಾನವನ್ನು ಬೇರೊಬ್ಬರು ತೆಗೆದುಕೊಳ್ಳುವುದು ಶಕ್ಯವಿಲ್ಲ. ಆದರೆ ಆ ಮೂವರಲ್ಲಿ ಮಹದೇವ್ ಸಂಪೂರ್ಣವಾಗಿ ನನ್ನಲ್ಲಿ ಲೀನವಾಗಿ ಹೋಗಿದ್ದರೆಂಬುದನ್ನು ನಾನು ಒಪ್ಪಿಕೊಳ್ಳಬೇಕು. ನನ್ನನ್ನು ಬಿಟ್ಟು ಅವರಿಗೆ ಬೇರೆ ಅಸ್ತಿತ್ವವೇ ಇರಲಿಲ್ಲ. ಮಹದೇವರ ಒಂದು ಹಿರಿಯ ಗುಣವೆಂದರೆ, ಅವರಿಗೆ ವಹಿಸಿದ ಕಾರ್ಯವನ್ನು ಮಾಡಲು ಅವರು ಸದಾ ಸಿದ್ಧರಾಗಿರುತ್ತಿದ್ದರು; ಅದನ್ನು ಬಹಳ ಉತ್ಸಾಹದಿಂದಲೂ ಮಾಡುತ್ತಿದ್ದರು.

ಅವರು ನನ್ನ ಜೀವನ ಚರಿತ್ರೆ ಬರೆಯಲು ಅಪೇಕ್ಷಿಸುತ್ತಿದ್ದರು. ಆದರೆ ಅವರ ಜೀವನ ಚರಿತ್ರೆಯನ್ನು ಬರೆಯಲು ನನಗೆ ಬಿಟ್ಟುಹೋದರು. ಮಹದೇವ್ ಅವರ ಮಿತ್ರರು ಅವರ ಕಾರ್ಯವನ್ನು ಮಾಡುವುದರ ಮೂಲಕ ಅವರ ವಾರ್ಷಿಕವನ್ನು ಆಚರಿಸಬೇಕು. ಅವರು ಶಕ್ತಿಶಾಲಿ ವ್ಯಕ್ತಿ. ಸುಂದರವಾದ ಲಕ್ಷಣವಾದ ಅಕ್ಷರ ಬರೆಯುತ್ತಿದ್ದರು. ಅವರಿಗೆ ಅನೇಕ ವಸ್ತುಗಳು ಪ್ರಿಯವಾಗಿದ್ದವು. ಅವುಗಳಲ್ಲಿ ಚರಕಕ್ಕೆ ಮೊದಲ ಸ್ಥಾನ. ಕಲಾಕಾರರಂತೆ ನಿಯಮಪ್ರಕಾರವಾಗಿ ಸುಂದರವಾಗಿ ನೂಲು ತೆಗೆಯುತ್ತಿದ್ದರು. ಕೆಲಸ ಕಾರ್ಯಗಳ ಗುರುತರವಾದ ಹೊರೆಯಿಂದ ಬಳಲಿ ಬೆಂಡಾಗಿ ಹೋಗುತ್ತಿದ್ದರೂ, ನಿತ್ಯ ನೂಲಲು ಸಮಯವನ್ನು ಹುಡುಕಿ ತೆಗೆಯುತ್ತಿದ್ದರು. ಚರಖದಿಂದ ಅವರಲ್ಲಿ ನವಚೇತನ ಉಂಟಾಗುತ್ತಿತ್ತು.

ಅವರ ಅನೇಕ ಪ್ರತಿಭೆ, ಸುಂದರ ಬರವಣಿಗೆ ಅನುಪಮವಾದುದಾಗಿದೆ. ಆ ವಿಷಯದಲ್ಲಿ ಅವರಿಗೆ ಯಾರೂ ಸಾಟಿಯಿಲ್ಲ. ರಾಮದಾಸ ಸ್ವಾಮಿಗಳು ತಮ್ಮದೊಂದು 'ಪದ' ದಲ್ಲಿ ಸುಂದರವಾದ ಅಕ್ಷರಗಳನ್ನು ಹೊಳೆಯುವ ಮುತ್ತಿಗೆ ಹೋಲಿಸಿದ್ದಾರೆ. ಅದೇ ರೀತಿ ಮಹದೇವರ ಲೇಖನಿಯಿಂದ ಹೊರಟ ಅಕ್ಷರಗಳು ಶುದ್ಧ ಮುತ್ತಿನಂತೆಯೇ ಇರುತ್ತಿದ್ದವು.

ಅವರ ಮೂರನೆಯ ಗುಣವೆಂದರೆ, ಹಿಂದೂಸ್ತಾನಿ ಸಂಗೀತದ ಬಗೆಗೆ ಅವರಿಗಿದ್ದ ಪ್ರೇಮ. ಎಲ್ಲರೂ ಆ ಗುಣವನ್ನು ಮೈಗೂಡಿಸಿಕೊಳ್ಳಲು

ಪ್ರಯತ್ನಿಸಬೇಕು. ಅವರು ಭಾಷಾಶಾಸ್ತ್ರಜ್ಞರು. ಬಂಗಾಳಿ, ಮರಾಠಿ ಉರ್ದು ಹಾಗೂ ಹಿಂದಿ ಭಾಷೆಯ ಮೇಲೆ ಅವರಿಗೆ ಸಂಪೂರ್ಣ ಪ್ರೌಢಿಮೆಯಿತ್ತು. ಸೆರೆಮನೆಯಲ್ಲಿ ತಮ್ಮ ಸಂಗಾತಿಯಾಗಿದ್ದ ಖ್ವಾಜಾ ಸಾಹೇಬ್ ಎಂ.ಎ. ಮಜೀದರಿಂದ ಪಾರಸಿ ಮತ್ತು ಅರಬ್ಬಿ ಭಾಷೆಗಳನ್ನೂ ಕಲಿಯುವ ಪ್ರಯತ್ನವನ್ನೂ ಮಾಡಿದ್ದರು. ಸುಶೀಲಾ ನಯ್ಯಾರ್‌ಗೆ ಮಹದೇವನ ಸಾವು ದೇಶಕ್ಕಾಗಿ ಮಾಡಿದ ಆತ್ಮಾರ್ಪಣವೆನಿಸಿತು".

ಗಾಂಧಿ ಅವರನ್ನು ಸೆರೆಮನೆಗೆ ಹೋಗಿ ಕಾಣಲು ನಾರಾಯಣ ದೇಸಾಯಿ ಅನುಮತಿ ಕೇಳಿದ್ದರು. ಅನುಮತಿ ದೊರೆಯಲಿಲ್ಲ. ಸೆರೆಮನೆ ಬಳಿ ಎತ್ತರವಾದ ಸ್ಥಳದಲ್ಲಿ ಗಾಂಧಿ ಅವರಿಗೆ ಆಪ್ತರಾಗಿದ್ದ ಲೇಡಿ ಪ್ರಮೀಲ ಥ್ಯಾಕರ್ಸೆ ಅವರ ಮನೆಯಾದ ಪರ್ಣಕುಟಿಯಿತ್ತು. ಎಲ್ಲರು ಅಲ್ಲಿಗೆ ಹೋಗಿ ದುರ್ಬಿನ್ ಮೂಲಕ ಸೆರೆಮನೆಯಲ್ಲಿ ನಡೆಯುತ್ತಿದ್ದ ದೈನಂದಿನ ದೃಶ್ಯಗಳನ್ನು ನೋಡುತ್ತಿದ್ದರು.

ಗಾಂಧೀಜಿ ಸೆರೆಮನೆಯಲ್ಲಿ 1943ರ ಫೆಬ್ರವರಿ 10ರಂದು ಉಪವಾಸ ಪ್ರಾರಂಭಿಸಿದ್ದಾರೆ ಎಂಬ ವಾರ್ತೆ ತಿಳಿದೊಡನೆ ದೇಸಾಯಿ ಅವರು ಪುನಃ ಅನುಮತಿ ಕೇಳಿದ್ದರು. "ನೀವು ಸೆರೆಮನೆಗೆ ಹೋಗಲು ಬಯಸುವಿರಾದರೆ, ಅಲ್ಲಿ ನೀವೂ ಕೈದಿಗಳ ತರಹ ಇರಬೇಕಾಗುತ್ತದೆ. ಹೊರ ಜಗತ್ತಿನೊಡನೆ ನಿಮ್ಮ ಎಲ್ಲ ಸಂಪರ್ಕವನ್ನು ಕಡಿದುಕೊಳ್ಳಬೇಕು" ಎಂದು ಸೆರೆಮನೆ ಅಧಿಕಾರಿಗಳು ತಿಳಿಸಿದರು. ಆ ಷರತ್ತುಗಳಿಗೆ ಒಪ್ಪಿಕೊಂಡ ನಂತರ ನಾರಾಯಣ ದೇಸಾಯಿ, ದುರ್ಗಾ ಬಹೆನ್ ಮತ್ತು ಕನು ಗಾಂಧಿ ಅವರಿಗೆ ಅನುಮತಿ ದೊರೆಯಿತು. ಮೂವರೂ ಹೊರಟರು. ಸೆರೆಮನೆಯ ಸುತ್ತಲೂ 11 ಅಡಿ ಎತ್ತರದ ಮುಳ್ಳು ತಂತಿಯ ಬೇಲಿಯನ್ನು ಹಾಕಲಾಗಿತ್ತು. ಇಷ್ಟೇ ಅಲ್ಲದೆ ಸುತ್ತಲೂ 76 ಜನ ಬಂದೂಕು ಹಿಡಿದ ಪಹರೆ ಅವರು 24 ತಾಸೂ ಗಸ್ತು ತಿರುಗುತ್ತಿದ್ದರು. ಗಾಂಧಿ ಅವರ ಮಂಚವನ್ನು ವರಾಂಡದ ನಡುವೆ ಹಾಕಲಾಗಿತ್ತು. ಮೂವರೂ ಗಾಂಧಿ ಅವರ ಕಾಲಿಗೆ ನಮಸ್ಕರಿಸಿದರು. ಅಂದಿಗೆ ಗಾಂಧೀಜಿ ಉಪವಾಸ ಆರಂಭಿಸಿ ಏಳು ದಿನಗಳಾಗಿತ್ತು. ಆ ಸಮಯದಲ್ಲಿ ಗಾಂಧೀಜಿ ಮಾತನಾಡಿದ್ದೇ ಅಪರೂಪ.

ಮಹದೇವದೇಸಾಯಿ ಅವರ ಭಸ್ಮವನ್ನು ಗಾಂಧೀಜಿ ಜೋಪಾನವಾಗಿ ಇಟ್ಟಿದ್ದು ದುರ್ಗಾಬಾಯಿಗೆ ಕೊಟ್ಟರು. ಮೊದಲು ಕೆಲ ದಿನಗಳು ಭಸ್ಮವನ್ನು ಗಾಂಧೀಜಿ ಹಣೆಗೆ ಇಟ್ಟುಕೊಳ್ಳುತ್ತಿದ್ದರು ಎಂದು ಮಹದೇವದೇಸಾಯಿ ಮರಣ ಹೊಂದಿದ ಸಮಯದಲ್ಲಿ ಗಾಂಧಿ ಅವರ ಜೊತೆಯಲ್ಲಿಯೇ ಇದ್ದ ಪ್ಯಾರೇಲಾಲ್ ಮತ್ತು ಸುಶೀಲಾ ನಯ್ಯಾರ್ ಆ ಮೂವರಿಗೆ ತಿಳಿಸಿದರು[15].

ನಂತರದ ದಿನಗಳಲ್ಲಿ ಗಾಂಧೀಜಿ ಆಗಾಖಾನ್ ಸೆರೆಮನೆಯಲ್ಲಿ ಮಹದೇವದೇಸಾಯಿಯ ಅಂತ್ಯಕ್ರಿಯೆ ನಡೆಸಿದ ಸ್ಥಳಕ್ಕೆ ಎರಡು ಸಲ ಭೇಟಿ ನೀಡಿ ಹೂವುಗಳನ್ನಿಡುತ್ತಿದ್ದರು. ಶನಿವಾರಗಳಂದು ಕಸ್ತೂರಬಾ, ಮಹದೇವದೇಸಾಯಿಯ ಸಮಾಧಿಗೆ ಪುಷ್ಪಗಳನ್ನು ಅರ್ಪಿಸಿ ಕೆಲಹೊತ್ತು ಕುಳಿತು ಬರುತ್ತಿದ್ದರು.

ನಂತರದಲ್ಲಿ ದಿವಂಗತ ಮಹದೇವದೇಸಾಯಿ ಅವರ ಚಿತಾಭಸ್ಮವನ್ನು ಸಂಗ್ರಹಿಸಿ ಅಗಾ ಖಾನ್ ಅರಮನೆ ಆವರಣದಲ್ಲಿಯೇ ಇರಿಸಿ, ಅದರ ಮೇಲೆ ಸಮಾಧಿ ಕಟ್ಟಲಾಯಿತು. ಗಾಂಧೀಜಿ ತಮ್ಮ ಕೈಯಿಂದ ಅದರ ಮೇಲೆ 'ಓಂ' ಎಂದು ಬರೆದರು. ಅವರು ಸೆರೆಮನೆಯಲ್ಲಿ ಇದ್ದಷ್ಟು ದಿನಗಳಲ್ಲಿ ಪ್ರತಿ ದಿನ ಅಲ್ಲಿಗೆ ಹೋಗಿ ಪ್ರದಕ್ಷಿಣೆ ಹಾಕಿ ಆ ಓಂ ಆಕೃತಿ ಮೇಲೆ ಹೂಗಳನ್ನಿಟ್ಟು ನಮಸ್ಕರಿಸಿ ಬರುತ್ತಿದ್ದರು. ಕಸ್ತೂರಬಾ ಅವರು ಆ ಸಮಾಧಿಯನ್ನು 'ಮಹದೇವ ಮಂದಿರ' ಎಂದು ಕರೆದರು.

ಆಗಿನ ಖ್ಯಾತ ಗುಜರಾತಿ ಕವಿಗಳಾದ 'ಮೇಘಾಣಿ' ಅವರು, ಅಗಲಿದ ಮಹದೇವದೇಸಾಯಿ ಬಗೆಗೆ ಒಂದು ಲೇಖನ ಬರೆದರು. ಅದಕ್ಕೆ ಅವರು ನೀಡಿದ್ದ ಶೀರ್ಷಿಕೆ "ಅಗ್ನಿಕುಂಡದಲ್ಲಿ ಅರಳಿದ ಹೂವು" ಎಂದಿತ್ತು. ಆ ಘಟನೆಯನ್ನು ನೆನಸಿಕೊಂಡರೆ ಆ ಶೀರ್ಷಿಕೆ ಬಹಳ ಅನ್ವರ್ಥವಾಗಿತ್ತು ಎಂದು ಮಹದೇವದೇಸಾಯಿ ಅವರ ಪುತ್ರ ನಾರಾಯಣ ದೇಸಾಯಿ ತಾವು ಬರೆದಿರುವ 'ಬಾಪುವಿನ ಮಡಿಲಲ್ಲಿ' ಕೃತಿಯ ಪುಟ 64ರಲ್ಲಿ ಸ್ಮರಿಸಿದ್ದಾರೆ.

1917ರ ನವಂಬರ್ 13 ರಂದು ಗಾಂಧಿ ಅವರೊಡನೆ ದಿನಚರಿಯನ್ನು ಬರೆಯಲು ಪ್ರಾರಂಭಿಸಿದ ಮಹದೇವದೇಸಾಯಿ ಮರಣ ಹೊಂದುವ

ಹಿಂದಿನ ದಿನದವರೆಗೂ ಅಂದರೆ 1942ರ ಆಗಸ್ಟ್ 14ರವರೆಗೆ ದಿನಚರಿಯನ್ನು ಬರೆದು ಕಾಪಾಡಿದ್ದರು. ನಂತರ ಮಹದೇವದೇಸಾಯಿ ಅವರ ಜಾಗವನ್ನು ಪ್ಯಾರೇಲಾಲ್ ನಯ್ಯಾರ್ ಅವರು ಆಪ್ತ ಕಾರ್ಯದರ್ಶಿಯಾಗಿ ಮುಂದುವರಿದರು.

ನಂತರದಲ್ಲಿ ಅಂದರೆ 1944ರ ಫೆಬ್ರವರಿ 22ರಂದು ಕಸ್ತೂರಬಾ ಸಹ ನಿಧನ ಹೊಂದಿದರು. ಅವರಿಗೂ ಆಗಾಖಾನ್ ಸೆರೆಮನೆಯ ಹಿಂಭಾಗದಲ್ಲಿದ್ದ ಮಹದೇವದೇಸಾಯಿಯ ಸಮಾಧಿ ಪಕ್ಕದಲ್ಲಿಯೇ ಅಂತ್ಯ ಸಂಸ್ಕಾರ ನೆರವೇರಿಸಿದರು. 1941–44ನೇ ಸಾಲು ಭಾರತದ ಇತಿಹಾಸದಲ್ಲಿ ತಲ್ಲಣಗಳುಂಟು ಮಾಡಿದ ಆ ನಾಲ್ಕು ವರ್ಷಗಳಲ್ಲಿ ರವೀಂದ್ರನಾಥ ಠಾಗೂರ್, ಜಮ್ನಾಲಾಲ್ ಬಜಾಜ್, ಮಹದೇವದೇಸಾಯಿ ಮತ್ತು ಕಸ್ತೂರ ಬಾರನ್ನು ಕಳೆದುಕೊಂಡಂತಾಯಿತು. ಒಬ್ಬರಿಗಿಂತ ಒಬ್ಬರು ಮಿಗಿಲಾಗಿ ಆಪ್ತರಾದವರು. ಇವರೊಡನೆ ಗಾಂಧಿ ಅವರ ಸಂಬಂಧ ಆಳವಾಗಿತ್ತು. ಆ ನಾಲ್ಕು ವರ್ಷಗಳು ಗಾಂಧೀಜಿ ಅವರ ಇಡೀ ಜೀವನದಲ್ಲಿ ಅತ್ಯಂತ ವೈಯುಕ್ತಿಕ ಅಘಾತಗಳನ್ನು ಸಹಿಸಿಕೊಳ್ಳಬೇಕಾಗಿ ಬಂದ ವರ್ಷಗಳಾಗಿದ್ದವು. ಸ್ವಾತಂತ್ರ್ಯ ಸಂಗ್ರಾಮವೆಂಬ ವಿಮೋಚನಾ ಹೋರಾಟದ ಅಂತಿಮ ಕಾಲಾವದಿಯೂ ಅದಾಗಿತ್ತು. ಇದರಲ್ಲಿ ಮಹದೇವದೇಸಾಯಿ ಮತ್ತು ಕಸ್ತೂರಬಾ ಅವರ ಬಲಿದಾನ ಸಮರ್ಪಣಭಾವದ್ದಾಗಿತ್ತು[16]. (ಬೃಂದಾವನದ ಆಕೃತಿಯಲ್ಲಿ ಈ ಇಬ್ಬರ ಸಮಾಧಿ ನಿರ್ಮಿತವಾಗಿದೆ).

1944ರ ಮೇ ಆರರಂದು ಬೆಳಗ್ಗೆ ಎಂಟು ಗಂಟೆಗೆ ಗಾಂಧೀಜಿ, ಅವರ ಬಿಡುಗಡೆಯಾಯಿತು. ಅಂದು ಬೆಳಗಿನ ಜಾವ ನಾಲ್ಕೂವರೆ ಗಂಟೆಗೆ ಪ್ರಾರ್ಥನೆ ನಡೆಯಿತು. ಏಳು ಗಂಟೆಗೆ ಸರಿಯಾಗಿ ಗಾಂಧೀಜಿ ಮಹದೇವ್ ಮತ್ತು ಕಸ್ತೂರ ಬಾ ಅವರ ಸಮಾಧಿ ಹತ್ತಿರ ನಡೆದರು. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪ್ರಾಣಾರ್ಪಣೆ ಮಾಡಿದ ಈ ಇಬ್ಬರು ಮಹಾನ್ ಚೇತನಗಳ ಅಂತಿಮ ದರ್ಶನಕ್ಕಾಗಿ ಅವರ ಮನಸ್ಸು ಹಾತೊರೆಯುತ್ತಿತ್ತು. ಮತ್ತೆ ಯಾವಾಗ ದರ್ಶನ ಲಭಿಸುವುದೋ ಹೇಳುವಂತಿಲ್ಲವೆಂದು ಅಲ್ಲಿಯೇ ಕುಳಿತು ಪ್ರಾರ್ಥನೆ ನಡೆಸಿದರು. ಎಲ್ಲರ ಕಂಠಗಳೂ ಬಿಗಿದಿದ್ದವು.

ಕಣ್ಣೀರು ಧಾರಾಕಾರವಾಗಿ ಸುರಿಯತೊಡಗಿತ್ತು. ಇಪ್ಪತ್ತೊಂದು ತಿಂಗಳ ಸೆರೆವಾಸದಲ್ಲಿ ಗಾಂಧೀಜಿಯ ಎರಡು ಕಣ್ಣಾಗಿದ್ದ ಎರಡು ಮಹಾನ್ ಚೈತನ್ಯಗಳು ಅಸ್ತಂಗತವಾಗಿದ್ದವು. ಅಲ್ಲಿಂದ ಹೊರ ಬರುವಾಗ ಗಾಂಧೀಜಿ "ಮುಂದಿನ ದಿನಗಳಲ್ಲಿ ಮಹದೇವದೇಸಾಯಿ ಮತ್ತು ಕಸ್ತೂರ ಬಾ ಅವರ ಅಗ್ನಿ ಸಂಸ್ಕಾರ ನಡೆದ ಈ ಸ್ಥಳ ನೋಡ ಬಯಸುವ ಎಲ್ಲರಿಗೂ ಯಾವ ಘಳಿಗೆಯಲ್ಲಿ ಬೇಕಾದರೂ ಹೋಗುವ ಅವಕಾಶ ಆಗಬೇಕು. ಅದಕ್ಕಾಗಿ ಸರ್ಕಾರ ಆಗಾಖಾನ್ ಅರಮನೆ ಆವರಣದ ಈ ಭಾಗವನ್ನು ತನ್ನ ವಶಕ್ಕೆ ತೆಗೆದುಕೊಳ್ಳುವುದೆಂಬ ವಿಶ್ವಾಸ ನನಗೆ ಇದೆ. ಈ ಪವಿತ್ರ ಸ್ಥಳದಲ್ಲಿ ಎರಡೂ ಹೊತ್ತೂ ಪ್ರಾರ್ಥನೆ ನಡೆಯುವ ವ್ಯವಸ್ಥೆಯಾಗಬೇಕು. ನನ್ನ ಪ್ರಾರ್ಥನೆಗನುಸಾರವಾಗಿ ಈ ಕಾರ್ಯ ನಡೆಯಲಿ" ಎಂದು ಬರೆದರು.[17] ಅಂದಿನ ಮಾತು ಈಗ ನಿಜ ಆಗಿ ರಾಷ್ಟ್ರೀಯ ಸ್ಮಾರಕವಾಗಿ ಬಹುಮಂದಿಗೆ ದೇಶಪ್ರೇಮದ ಪ್ರೇರಣೆ ನೀಡುತ್ತಿದೆ.

ಮಹದೇವದೇಸಾಯಿ ಮರಣ ಹೊಂದಿದ ಐದು ವರ್ಷಕ್ಕೆ ಸರಿಯಾಗಿ 1947ರ ಆಗಸ್ಟ್ 15 ರಂದುಭಾರತ ಸ್ವತಂತ್ರವಾಯಿತು. ಸ್ವಾತಂತ್ರ್ಯದೊಂದಿಗೆ ಮಹದೇವದೇಸಾಯಿ ಅವರ ಹೆಸರೂ ಅಜರಾಮರವಾಯಿತು.

ಕನ್ನಡನಾಡು ಮಹದೇವದೇಸಾಯಿ ಅವರ ಅನುಪಮ ಸೇವೆಯನ್ನು ಗ್ರಹಿಸುವಲ್ಲಿ ಎಂದೂ ಹಿಂದಡಿಯಿಟ್ಟಿಲ್ಲ. ಬೆಂಗಳೂರಿನ ಕೇಂದ್ರ ಸ್ಥಾನದಲ್ಲಿರುವ ಗಾಂಧಿ ಭವನದ ಎರಡನೇ ಮಹಡಿಯಲ್ಲಿರುವ ಸುಸಜ್ಜಿತ ಸಭಾ ಭವನಕ್ಕೆ ಮಹದೇವದೇಸಾಯಿ ಸಭಾಂಗಣವೆಂದು ಹೆಸರಿಸಿರುವುದು ಇದಕ್ಕೆ ಸಾಕ್ಷಿಯಾಗಿದೆ. ಅವರ ದಿನಚರಿ ಪುಟಗಳ ಸಂಗ್ರಹವೂ ಗಾಂಧಿ ಭವನದ ಗ್ರಂಥಾಲಯದಲ್ಲಿವೆ.

## ಅಡಿ ಟಿಪ್ಪಣಿಗಳು

1. ಸಂಪದ್ಗಿರಿರಾವ್, 'ಯುಗಪುರುಷ ಗಾಂಧಿ' ಪುಟ– 81
2. ಸುಮಿತ್ರಾ ಗಾಂಧೀ ಕುಲಕರ್ಣಿ. 'ಮಹಾತ್ಮ ಗಾಂಧೀ ನನ್ನ ತಾತ' ಭಾಗ–2, ಪುಟ–260.
3. ಕೆ. ಎಸ್. ನಾರಾಯಣ ಸ್ವಾಮಿ. 'ನಾಲ್ವರು ಗಾಂಧೀವಾದಿಗಳು' ಪುಟ– 11ರಿಂದ 17.
4. ಸಿದ್ದವನಹಳ್ಳಿ ಕೃಷ್ಣಶರ್ಮ, 'ವರ್ಧಾಯಾತ್ರೆ' ಪುಟ–59
5. ಸೇಗಾಂವ್ ಎಂಬ ಹೆಸರಿನ ಮತ್ತೊಂದು ಊರು (ಪಿನ್ ಕೋಡ್ 451442) ಮಧ್ಯ ಪ್ರದೇಶದಲ್ಲಿನ ನಾಗಪುರ, ಭೂಸ್ವಾಳ್ ರೈಲ್ವೆ ಮಾರ್ಗದಲ್ಲಿ ಇದ್ದು ಅಲ್ಲಿ ರೈಲ್ವೆ ಸ್ಟೇಷನ್ ಸಹ ಇರುವುದರಿಂದ ಟಪಾಲಿನ ಹಂಚುವಿಕೆಯಲ್ಲಿ ಗೊಂದಲವಾಗುತ್ತಿದ್ದ ಕಾರಣ 1940ರಲ್ಲಿ ಸೇಗಾಂವ್ ಹೆಸರನ್ನು ಸೇವಾಗ್ರಾಮ ಎಂದು ಬದಲಾಯಿಸಲಾಯಿತು. ('ಸೇವಾಗ್ರಾಮ ಆಶ್ರಮ ಪರಿಚಯ' ಗಾಂಧಿ ಸ್ಮಾರಕ ನಿಧಿ ಬೆಂಗಳೂರು, 1969. ಪುಟ–2. )
6. ಸುಮಿತ್ರಾ ಗಾಂಧೀ ಕುಲಕರ್ಣಿ, 'ಮಹಾತ್ಮ ಗಾಂಧೀ–ನನ್ನ ತಾತ', ಭಾಗ 2, ಪುಟ–260 ಮತ್ತು 261
7. ಎಸ್. ವಿಶ್ವನಾಥ್, 'ಮಹಾತ್ಮರ ಮಾತು ಮಾರ್ಗ' ಪುಟ– 20 ಮತ್ತು 21.
8. ಸುಮಿತ್ರಾ ಗಾಂಧೀ ಕುಲಕರ್ಣಿ, 'ಮಹಾತ್ಮ ಗಾಂಧೀ–ನನ್ನತಾತ' ಭಾಗ 2, ಪುಟ–263.
9. ಎಸ್. ವಿಶ್ವನಾಥ್, ಮಹಾತ್ಮರ ಮಾತು ಮಾರ್ಗ' ಪುಟ–23.

10. ಸಿದ್ದವನಹಳ್ಳಿ ಕೃಷ್ಣಶರ್ಮ, 'ವರ್ಧಾಯಾತ್ರೆ' ಪುಟ–133ರಿಂದ 141.

11. ಅದೇ ಪುಟ 88.

12. ನಾರಾಯಣ ದೇಸಾಯಿ, 'ಬಾಪುವಿನ ಮಡಿಲಲ್ಲಿ' ಪುಟ–124 ರಿಂದ 125.

13. ಅದುವರೆವಿಗೂ ಗಾಂಧೀಜಿ ಮತ್ತಿತರರನ್ನು ಬಂಧಿಸಿದರೆ ಎರವಾಡ ಸೆರೆಮನೆಯಲ್ಲಿ ಬಂಧಿಸುತ್ತಿದ್ದರು. ಗಾಂಧೀಜಿ ಆ ಸೆರೆಮನೆಯನ್ನು 'ಎರವಾಡ ಮಂದಿರ' ಎಂದು ಕರೆಯುತ್ತಿದ್ದರು.

14. ಶ್ರೀಮತಿ ಬಿ. ಕಾಮಾಕ್ಷಮ್ಮ, 'ಕಸ್ತೂರಿ ಬಾ' ಕಾರ್ತಿಕೇಯ ಪ್ರಕಾಶನ, ಸಪ್ತಗಿರಿ, ಹರಿಹರ, 1982, ಪುಟ 132.

15. ನಾರಾಯಣ ದೇಸಾಯಿ, 'ಬಾಪುವಿನ ಮಡಿಲಲ್ಲಿ' ಪುಟ–124 ರಿಂದ 125. ಮತ್ತು 133.

16. ಅದೇ ಪುಟ 120.

17. ಪಿ. ವೆಂಕೋಬರಾವ್, 'ಮೊಮ್ಮಗಳಿಗೆ ಗಾಂಧೀಜಿಯ ಹಿತವಚನ' ಪುಟ–195.

## ಗ್ರಂಥ ಋಣ


1. ಕೆ. ಎಸ್. ನಾರಾಯಣಸ್ವಾಮಿ, 'ನಾಲ್ವರು ಗಾಂಧೀವಾದಿಗಳು', ಗಾಂಧೀ ಸ್ಮಾರಕ ನಿಧಿ, ಬೆಂಗಳೂರು-01, 1992.
2. ಮೋ. ಕ. ಗಾಂಧೀ, 'ನನ್ನ ಸಮಕಾಲೀನರು', ಗಾಂಧೀ ಸ್ಮಾರಕ ನಿಧಿ, ಬೆಂಗಳೂರು-01, 1960.
3. ಕೆ. ಸಂಪದ್ಗಿರಿರಾವ್, 'ಯುಗಪುರುಷ ಗಾಂಧಿ', ಗಾಂಧೀಜಿ ಜನ್ಮಶತಮಾನೋತ್ಸವ ಸಮಿತಿ, ಮೈಸೂರು ರಾಜ್ಯ, 1970.
4. ಸುಮಿತ್ರಾ ಗಾಂಧೀ ಕುಲಕರ್ಣಿ, ಅನುವಾದ ಪ್ರೊ ಬಿ. ವೈ. ಲಲಿತಾಂಬ, 'ಮಹಾತ್ಮಾ ಗಾಂಧೀ-ನನ್ನ ತಾತ' (ಭಾಗ 2), ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು-56, 2010.
5. ಗೊರೂರು ರಾಮಸ್ವಾಮಿ ಅಯ್ಯಂಗಾರ್, ಭಾಷಾಂತರ 'ಆತ್ಮ ಕಥೆ ಅಥವಾ ನನ್ನ ಸತ್ಯಾನ್ವೇಷಣೆ', ಮೂಲ-ಗಾಂಧೀಜಿ, ಪ್ರಥಮ ಪ್ರಕಟಣೆ ಸಬರಮತಿ ಆಶ್ರಮ, 1925.
6. ರಾಜ್ ಮೋಹನ್ ಗಾಂಧಿ, ಕನ್ನಡ ಅನುವಾದ: ಜಿ. ಎನ್. ರಂಗನಾಥ ರಾವ್, 'ಮೋಹನ್ ದಾಸ್ ಒಂದು ಸತ್ಯ ಕಥೆ', ಲೋಕ ಶಿಕ್ಷಣ ಟ್ರಸ್ಟ್, ಬೆಂಗಳೂರು-ಹುಬ್ಬಳ್ಳಿ, 2012.
7. ನಾರಾಯಣ ದೇಸಾಯಿ, (ಅನುವಾದ ಶ್ರೀಮತಿ ಕೃಪಾ) 'ಬಾಪುವಿನ ಮಡಿಲಲ್ಲಿ', ಸಾಹಿತ್ಯ ಮಂದಿರ, ಬೆಂಗಳೂರು-41, 1969.
8. ಎಸ್. ವಿಶ್ವನಾಥ್, 'ಮಹಾತ್ಮರ ಮಾತು-ಮಾರ್ಗ', ಮಹಾತ್ಮ ಗಾಂಧೀ ಸ್ಮಾರಕ ಟ್ರಸ್ಟ್ ಮಂಡ್ಯ, 2015.

9. ಗೋವಿಂದಮೂರ್ತಿ ದೇಸಾಯಿ, 'ಬಾಪೂಜಿಯ ಬದುಕು', ಮಿಂಚಿನಬಳ್ಳಿ ಕಾರ್ಯಾಲಯ, ಧಾರವಾಡ, 1958.

10. ಸಿದ್ದವನಹಳ್ಳಿ ಕೃಷ್ಣಶರ್ಮ, 'ವಾರ್ಧಾ ಯಾತ್ರೆ', ಸಾಧನ ಮುದ್ರಣಾಲಯ, ಧಾರವಾಡ, 1939.

11. ಡಾ. ವಿಜಯಾ ಸುಬ್ಬರಾಜ್, 'ಬೆಸುಗೆಯ ಬಂಧನದಲ್ಲಿ', ದೇಸಿ ಪುಸ್ತಕ, ವಿಜಯನಗರ, ಬೆಂಗಳೂರು–40, 2016.

12. ಪ್ರೊ. ಎನ್. ಕೃಷ್ಣಸ್ವಾಮಿ, 'ಮಹಾತ್ಮ' ಭಾರತೀಯ ವಿದ್ಯಾಭವನ, ಬೆಂಗಳೂರು, 2000.

13. ವೇಮಗಲ್ ಸೋಮಶೇಖರ್, 'ಬೆಂಗಳೂರಿನಲ್ಲಿ ಮಹಾತ್ಮ ಗಾಂಧಿ', ಭಾರತೀಯ ವಿದ್ಯಾಭವನ, ರೇಸ್ ಕೋರ್ಸ್ ರಸ್ತೆ, ಬೆಂಗಳೂರು–01, 2004.

14. ಮತ್ತೂರು ಕೃಷ್ಣಮೂರ್ತಿ, 'ಗಾಂಧಿ ಉಪನಿಷತ್' ಎಂ. ಪಿ. ಬಿರ್ಲಾ ಫೌಂಡೇಷನ್, ರೇಸ್ ಕೋರ್ಸ್ ರಸ್ತೆ, ಬೆಂಗಳೂರು–01. 2002.

15. ಕೆ. ಎಸ್. ನಾರಾಯಣ ಸ್ವಾಮಿ, 'ಮಹಾದೇವ ದೇಸಾಯಿ', ರಾಷ್ಟ್ರೋತ್ಥಾನ ಸಾಹಿತ್ಯ, ಬೆಂಗಳೂರು–19.

16. ಶ್ರೀಮತಿ ಬಿ. ಕಾಮಕ್ಷಮ್ಮ, 'ಕಸ್ತೂರಿ ಬಾ' ಕಾರ್ತಿಕೇಯ ಪ್ರಕಾಶನ, ಸಪ್ತಗಿರಿ, ಹರಿಹರ, 1982.

17. ಡಾ. ಎನ್. ಜಗದೀಶ್ ಕೊಪ್ಪ, 'ಗಾಂಧಿ ಗಿರಿಯ ಫಸಲುಗಳು' ಸಪ್ನ ಬುಕ್ ಹೌಸ್, ಬೆಂಗಳೂರು, 2018

18. ಅಂತರ್ಜಾಲದಲ್ಲಿನ ಮಾಹಿತಿ.

19) C. B. Dalal, 'Gandhi 1915-48 A Detailed Chronology' Gandhi Peace Foundation, New Delhi, 1971.



ಭಾರತೀಯ ವಿಜ್ಞಾನ ಸಂಸ್ಥೆಯಲ್ಲಿ ಗಾಂಧೀಜಿ ಅವರ ಎಡಗಡೆ
ಸಿ.ವಿ. ರಾಮನ್ ಮತ್ತು ಬಲಗಡೆಯಲ್ಲಿ ಮಹದೇವದೇಸಾಯಿ
ದಿ. 05-06-1936



ಮಹದೇವದೇಸಾಯಿ ಮತ್ತು ಕಸ್ತೂರಬಾ ಅವರ
ಅಗಾಖಾನ್ ಅರಮನೆಯಲ್ಲಿನ ಸಮಾಧಿ ಸ್ಥಳ

# ಗಾಂಧೀಜಿ ಅವರ ಜೀವನ ಘಟನಾವಳಿಗಳು

| | |
|---|---|
| ಪೋರಬಂದರದಲ್ಲಿ ಜನನ | 2. 10. 1869 |
| ಕಸ್ತೂರ್‌ಬಾರೊಂದಿಗೆ ವಿವಾಹ | 1881 |
| ಮೆಟ್ರಿಕ್ಯುಲೇಶನ್ ಉತ್ತೀರ್ಣರಾದದ್ದು | 1887 |
| ಶಿಕ್ಷಣಕ್ಕಾಗಿ ಇಂಗ್ಲೆಂಡಿಗೆ ಪ್ರಯಾಣ | 1888 |
| ಬ್ಯಾರಿಸ್ಟರರಾಗಿ ದಾಖಲಾತಿ | 1891 |
| ಮರಳಿ ಭಾರತಕ್ಕೆ | 1891 |
| ದಕ್ಷಿಣ ಆಫ್ರಿಕಾಕ್ಕೆ ಹಡಗಿನಲ್ಲಿ ಪ್ರಯಾಣ | 1893 |
| ಭಾರತ ಸಂದರ್ಶನ | 1896 |
| | ಮತ್ತು 1901 |
| ಬೋರ್ ಯುದ್ಧ ಮತ್ತು ಜೂಲು ದಂಗೆಯಲ್ಲಿ | |
| ಇಂಡಿಯನ್ ಅಂಬುಲೆನ್ಸ್ ಕೋರ್ ನೇತೃತ್ವ | 1899 |
| | ಮತ್ತು 1906 |
| ಭಾರತ ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶನದಲ್ಲಿ ಪಾಲ್ಗೊಂಡಿದ್ದು | 1901 |
| ಇಂಡಿಯನ್ ಒಪಿನಿಯನ್ ಪತ್ರಿಕೆಯ ಪ್ರಾರಂಭ | 1903 |
| ಫೀನಿಕ್ಸ್ ಆಶ್ರಮ ಸ್ಥಾಪನೆ | 1904 |
| ಬ್ರಹ್ಮಚರ್ಯ ವ್ರತ ಸ್ವೀಕಾರ | 1906 |
| ಇಂಗ್ಲೆಂಡಿಗೆ ಪ್ರಯಾಣ | 1906 |
| | ಮತ್ತು 1909 |
| ದಕ್ಷಿಣ ಆಫ್ರಿಕಾದಲ್ಲಿ ಪ್ರಥಮ ಜೈಲುವಾಸ | 1908 |
| ಟಾಲ್‌ಸ್ಟಾಯ್ ಆಶ್ರಮ ಸ್ಥಾಪನೆ | 1910 |
| ದಕ್ಷಿಣ ಆಫ್ರಿಕಾದಲ್ಲಿ ಚಾರಿತ್ರಿಕ ಸತ್ಯಾಗ್ರಹ ಆರಂಭ | 1913 |
| ಭಾರತಕ್ಕೆ ಆಗಮನ | 1915 |
| ಸಬರಮತಿ ಆಶ್ರಮ ಸ್ಥಾಪನೆ | 1915 |

| | |
|---|---|
| ಖೇಡಾದಲ್ಲಿ ಕರನಿರಾಕರಣೆ ಚಳುವಳಿ | 1918 |
| ಜಲಿಯನ್ ವಾಲಾಬಾಗ್ ಹತ್ಯಾಕಾಂಡ | 1919 |
| ಯಂಗ್ ಇಂಡಿಯಾ, ನವಜೀವನ ಪತ್ರಿಕೆಗಳ ಆರಂಭ | 1919 |
| ಅಸಹಕಾರ ಆಂದೋಲನ | 1921 |
| ಭಾರತದಲ್ಲಿ ಪ್ರಥಮ ಜೈಲುವಾಸ | 1922 |
| ಖಾದಿ ಪ್ರವಾಸ | 1927 |
| ಉಪ್ಪಿನ ಸತ್ಯಾಗ್ರಹ ಮತ್ತು ದಾಂಡೀಯಾತ್ರೆ | 1930 |
| ಯೂರೋಪು ಸಂದರ್ಶನ ಮತ್ತು ದುಂಡು ಮೇಜಿನ ಪರಿಷತ್ತು | 1931 |
| ಸೇವಾಗ್ರಾಮ ಆಶ್ರಮ ಸ್ಥಾಪನೆ | 1933 |
| ಹರಿಜನ ಯಾತ್ರೆ | 1933 |
| ಹರಿಜನ ಸಾಪ್ತಾಹಿಕ ಪ್ರಾರಂಭ | 1933 |
| ನಯೀ ತಾಲೀಂ ಶಿಕ್ಷಣ ಪದ್ಧತಿ ಪ್ರಾರಂಭ | 1937 |
| "ಭಾರತ ಬಿಟ್ಟು ತೊಲಗಿ" ಚಳುವಳಿ | 1942 |
| ಕೊನೆಯ ಬಾರಿಗೆ ಆಗಾಖಾನ್ ಅರಮನೆಯಲ್ಲಿ ಸೆರೆವಾಸ | 1942–44 |
| ಹಂತಕನ ಗುಂಡೇಟಿಗೆ ಬಲಿ | 30–1–1948 |

# ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಪ್ರಕಟಣೆಗಳು

| | | |
|---|---|---|
| 1. | ಆರೋಗ್ಯ ರಹಸ್ಯ | 10–00 |
| 2. | ಕರ್ನಾಟಕದಲ್ಲಿ ಗಾಂಧೀ | 5–00 |
| 3. | ರಾಮನಾಮ | 6–00 |
| 4. | ಗಾಂಧೀ ಬಳಗದ ವಿದೇಶಿಯರು | 40–00 |
| 5. | ಆರೋಗ್ಯ | 8–00 |
| 6. | ಪ್ರಾರ್ಥನೆ | 8–00 |
| 7. | ಸತ್ಯಾಗ್ರಹ | 8–00 |
| 8. | ಮಹಿಳೆಯರಿಗಾಗಿ | 8–00 |
| 9. | ಪಂಚಾಯತ್ ರಾಜ್ | 12–00 |
| 10. | ಆದರ್ಶಗಳು | 12–00 |
| 11. | ನಮ್ಮ ಗಾಂಧೀ ತಾತ | 25–00 |
| 12. | ದೇವನಗರಿಯಲ್ಲಿ ಗಾಂಧೀ ಧ್ವನಿ | 2–00 |
| 13. | ನಮ್ಮ ಗಾಂಧೀ ತಾತ | 15–00 |
| 14. | ಹೋರಾಟ ಶ್ರೀ | 40–00 |
| 15. | ಮಹಾತ್ಮ ಗಾಂಧೀಜಿಯವರ ಜೀವನದ ಮೈಲಿಗಲ್ಲುಗಳು | 3–00 |
| 16. | ಗಾಂಧೀಜಿ ಜೀವನ ಚರಿತ್ರೆ | 25–00 |
| 17. | ಕುವೆಂಪು ಕಂಡ ಗಾಂಧೀ | 25–00 |
| 18. | ಉಪ್ಪಿನ ಸತ್ಯಾಗ್ರಹ | 5–00 |
| 19. | ಹಿಂದ್ ಸ್ವರಾಜ್ | 50–00 |
| 20. | ಗಾಂಧೀ ಮತ್ತು ಆಧ್ಯಾತ್ಮಿಕ ಜೀವನ | 25–00 |
| 21. | ನನ್ನ ಕನಸಿನ ಭಾರತ | 30–00 |
| 22. | ಹಿಂದೂ ಧರ್ಮ | 25–00 |
| 23. | ಮಹಿಳೆಯರು | 30–00 |
| 24. | ಸ್ವಾತಂತ್ರ್ಯ | 25–00 |
| 25. | ಅಸ್ಪೃಶ್ಯತೆ | 30–00 |
| 26. | ಒಳ್ಳೆಯ ಜೀವನ | 25–00 |
| 27. | ಪ್ರಾರ್ಥನೆ | 25–00 |
| 28. | ಗಾಂಧೀ ಮತ್ತು ಕರ್ನಾಟಕ | 200–00 |
| 29. | ಸತ್ಯ | 30–00 |
| 30. | ವಿದ್ಯಾರ್ಥಿಗಳಿಗಾಗಿ | 30–00 |
| 31. | ಸರ್ವೋದಯ | 30–00 |

| | | |
|---|---|---|
| 32. | ಖಾದಿ ಗ್ರಾಮೋದ್ಯೋಗ | 30–00 |
| 33. | ನನ್ನ ಬಾಲ್ಯದ ನೆನಪುಗಳು | 30–00 |
| 34. | ಗ್ರಾಮರಾಜ್ಯ ಆಡಳಿತ | 5–00 |
| 35. | ನನ್ನ ಕನಸಿನ ಸ್ವರಾಜ್ಯ | 5–00 |
| 36. | ಗಾಂಧೀ ಮತ್ತು ಹಾಸ್ಯ | 20–00 |
| 37. | ನನ್ನ ಆದರ್ಶಗ್ರಾಮ | 5–00 |
| 38. | ಮಹಾತ್ಮ ಗಾಂಧೀ ವಿಚಾರಗಳು ಹಾಗೂ ವ್ಯವಸ್ಥಾಪನ ಪದ್ದತಿ | 48–00 |
| 39. | ಸತ್ಯಾಗ್ರಹಿ | 40–00 |
| 40. | ಗ್ರಾಮದಾನ ಗ್ರಾಮ ಸ್ವರಾಜ್ಯ | 25–00 |
| 41. | ಗಾಂಧೀಜಿಯವರ ಪ್ರಾತ: ಸಾಯಂ ಪ್ರಾರ್ಥನೆ ಮತ್ತು ಭಜನೆ | |
| 42. | ಉಪ್ಪಿನ ಸತ್ಯಾಗ್ರಹ ಮತ್ತು ಮೈಲಾರ ಮಹಾದೇವ | 5–00 |
| 43. | ಸತ್ಯಾಗ್ರಹ | 5–00 |
| 44. | ಹಿಂದ್ ಸ್ವರಾಜ್ | 5–00 |
| 45. | ಆರೋಗ್ಯ | 5–00 |
| 46. | ಮಹಾತ್ಮ ಗಾಂಧಿ ಪ್ರಸ್ತುತತೆ | 10–00 |
| 47. | ಬಹುರೂಪಿ ಗಾಂಧಿ | 10–00 |
| 48. | ನಂದಿ ಗಿರಿಧಾಮದಲ್ಲಿ ಮಹಾತ್ಮ ಗಾಂಧಿ | 30–00 |
| 49. | ಕೃತಯುಗಿ ವಿನೋಬಾ ಭಾವೆ | 15–00 |
| 50. | ಮೋಹನ ತರಂಗ | 40–00 |
| 51. | ನಮ್ಮ ಗಾಂಧಿ ತಾತ | 5–00 |
| 52. | ಗೀತಾ ಪ್ರವಚನ | 80–00 |
| 53. | ಜೆ. ಪಿ. ಜೀವನ ಹಾದಿ | 45–00 |
| 54. | ಗಣ್ಯರು ಕಂಡಂತೆ ಗಾಂಧಿ | 20. 0 |
| 55. | ಗೀತಾಮಾತೆ | 80. 00 |
| 56. | ಡಾ. ಹೊ. ಶ್ರೀನಿವಾಸಯ್ಯ | |
| 56. | Temple & Mosque | 10–00 |
| 57. | Rastrapita Mahatma Gandhi | 25–00 |
| 58. | Swarajya of Dreams | 5–00 |
| 59. | Gandhi My Grand Father | 5–00 |
| 60. | Grand Pa Gandhi | 5–00 |
| 61. | Relevance of Gandhi | 20–00 |
| 62. | Vinoba age of the sage | 20. 00 |

## ಕರ್ನಾಟಕದಲ್ಲಿ ಗಾಂಧೀಜಿ ಭೇಟಿ ನೀಡಿದ ಸ್ಥಳಗಳು

| | |
|---|---|
| ● ಬೆಂಗಳೂರು | ದಿ. 08–05–1915 |
| ● ಬೆಳಗಾವಿ | ದಿ. 27–04–1916 ರಿಂದ<br>ದಿ. 01–05–1916 ರವರೆಗೆ |
| ● ಬಿಜಾಪುರ (ವಿಜಯಪುರ) | ದಿ. 05–05–1918 ರಿಂದ<br>ದಿ. 06–05–1918 ರವರೆಗೆ |
| ● ಕಾಸರಗೋಡು | ದಿ. 19–08–1920 |
| ● ಮಂಗಳೂರು | ದಿ. 20–08–1920 |
| ● ಬೆಂಗಳೂರು | ದಿ. 21–08–1920 |
| ● ನಿಪ್ಪಾಣಿ, ಚಿಕ್ಕೋಡಿ, ಹುಕ್ಕೇರಿ<br>ಸಂಕೇಶ್ವರ, ಬೆಳಗಾವಿ | ದಿ. 08–11–1920 |
| ● ಬೆಳಗಾವಿ ಶಹಾಪುರ<br>ಖಾನಾಪುರ, ನಂದಗಢ<br>ಹಳ್ಯಾಳ | ದಿ. 09–11–1920 |
| ● ಧಾರವಾಡ | ದಿ. 10–11–1920 |
| ● ಹುಬ್ಬಳ್ಳಿ, ಗದಗ | ದಿ. 11–11–1920 |
| ● ಸಾಂಗಲಿ | ದಿ. 12–11–1920 |
| ● ಬಾಗಲಕೋಟೆ | ದಿ. 27–05–1921 |
| ● ಬಿಜಾಪುರ (ವಿಜಯಪುರ), ಸೊಲ್ಲಾಪುರ | ದಿ. 28–05–1921 |
| ● ಬಳ್ಳಾರಿ | ದಿ. 30–09–1921 |
| ● ಬೆಳಗಾವಿ | ದಿ. 21–12–1924 ರಿಂದ<br>ದಿ. 30–12–1924 ರವರೆಗೆ |
| ● ಗುಲ್ಬರ್ಗಾ | ದಿ. 22–02–1927 ರಿಂದ<br>ದಿ. 23–02–1927 ರವರೆಗೆ |
| ● ನಿಪ್ಪಾಣಿ | ದಿ. 27–03–1927 ರಿಂದ<br>ದಿ. 31–03–1927 ರವರೆಗೆ |

| | |
|---|---|
| ● ಬೆಳಗಾವಿ | ದಿ. 01–04–1927 |
| | ದಿ. 18–04–1027 ರಿಂದ |
| | ದಿ. 19–04–1927ರವರೆಗೆ |
| ● ಬೆಂಗಳೂರು | ದಿ. 06–06–1927 ರಿಂದ |
| | ದಿ. 13–07–1927 ರವರೆಗೆ |
| ● ತುಮಕೂರು | ದಿ. 14–07–1927 |
| ● ತುಮಕೂರು, ಮಧುಗಿರಿ | ದಿ. 15–07–1927 |
| ● ತುಮಕೂರು | ದಿ. 16–07–1927 |
| ● ಬೆಂಗಳೂರು | ದಿ. 17–07–1927 |
| ● ಬೆಂಗಳೂರು | ದಿ. 18–07–1927 |
| ● ಮೈಸೂರು | ದಿ. 19–07–1927 ರಿಂದ |
| | ದಿ. 21–07–1927 ರವರೆಗೆ |
| ● ಕೃಷ್ಣರಾಜಸಾಗರ, ಯಡತೊರೆ ಶ್ರೀರಂಗಪಟ್ಟಣ, ದರಿಯಾದೌಲತ್ | ದಿ. 22–07–1927 |
| ● ಮೈಸೂರು | ದಿ. 23–07–1927 |
| ● ಬೆಂಗಳೂರು | ದಿ. 24–07–1927 ರಿಂದ |
| | ದಿ. 30–07–1927 ರವರೆಗೆ |
| ● ಕ್ಲೊಸ್‌ಪೇಟೆ (ರಾಮನಗರ) | ದಿ. 31–07–1927 |
| ● ಕಾನಕಾನಹಳ್ಳಿ (ಕನಕಪುರ) | |
| ● ಬೆಂಗಳೂರು | ದಿ. 01–08–1927 |
| ● ಅರಸೀಕರೆ, ಹಾಸನ | ದಿ. 02–08–1927 |
| ● ಹಾಸನ | ದಿ. 03–08–1927 |
| ● ಹಾಸನ, ಹೊಳೆನರಸೀಪುರ | ದಿ. 04–08–1927 |
| ● ಬೆಂಗಳೂರು | ದಿ. 05–08–1927 ರಿಂದ |
| | ದಿ. 11–08–1927 ರವರೆಗೆ |
| ● ದಾವಣಗೆರೆ | ದಿ. 12–08–1927 |
| ● ಹರಿಹರ, ಹೊನ್ನಾಳಿ ಮಲೆಬೆನ್ನೂರು | ದಿ. 13–08–1927 |

| | |
|---|---|
| • ಶಿವಮೊಗ್ಗ | ದಿ. 14-08-1927 ರಿಂದ<br>ದಿ. 15-08-1927 ರವರೆಗೆ |
| • ಆಯನೂರು, ಕುಂಸಿ, ಸಾಗರ<br>ಶಿವಮೊಗ್ಗ | ದಿ. 16-08-1927 |
| • ಶಿವಮೊಗ್ಗ, ತೀರ್ಥಹಳ್ಳಿ<br>ಮಂದಗದ್ದೆ, ರಾಜನೂರು | ದಿ. 17-08-1927 |
| • ಭದ್ರಾವತಿ, ತರೀಕೆರೆ | ದಿ. 18-08-1927 |
| • ಬೀರೂರು, ಕಡೂರು | |
| • ಚಿಕ್ಕಮಗಳೂರು | ದಿ. 19-08-1927 |
| • ಬೇಲೂರು, ಹಳೇಬೀಡು | ದಿ. 20-08-1927 |
| • ಅರಸೀಕೆರೆ | |
| • ತಿಪಟೂರು | ದಿ. 21-08-1927 |
| • ಬೆಂಗಳೂರು | ದಿ. 22-08-1927 |
| • ಬೆಂಗಳೂರು | ದಿ. 23-08-1927 |
| • ಹೊಸೂರು, ಸೂಳಗಿರಿ<br>ಕೃಷ್ಣಗಿರಿ | ದಿ. 24-08-1927 |
| • ಬೆಂಗಳೂರು | ದಿ. 25-08-1927 ರಿಂದ<br>ದಿ. 30-08-1927 ರವರೆಗೆ |
| • ಹಿಂದೂಪುರ, ವಿಧುರಾಶ್ವತ್ಥ<br>ಗೌರಿಬಿದನೂರು<br>ದೊಡ್ಡಬಳ್ಳಾಪುರ, ತುಮಕೂರು<br>ತ್ಯಾಮಗೊಂಡ್ಲು, ನೆಲಮಂಗಲ<br>ಬೆಂಗಳೂರು, ಮೈಸೂರು | ದಿ. 04-01-1934 |
| • ತಗಡೂರು, ಬದನವಾಳ<br>ನಂಜನಗೂಡು, ಮೈಸೂರು | ದಿ. 05-01-1934 |
| • ಮಂಡ್ಯ, ಚನ್ನಪಟ್ಟಣ, ರಾಮನಗರ<br>ಕನಕಪುರ, ಬಿಡದಿ, ಕೆಂಗೇರಿ | ದಿ. 06-01-1934 |

| | |
|---|---|
| • ಬೆಂಗಳೂರು | ದಿ. 07-01-1934 ರಿಂದ<br>ದಿ. 09-01-1934 ರವರೆಗೆ |
| • ಪೊನ್ನಂಪೇಟೆ, ಹುದಿಕೇರಿ | ದಿ. 22-02-1934 |
| • ವಿರಾಜಪೇಟೆ, ಬೆಳ್ಳೂರು | ದಿ. 23-02-1934 |
| • ಸೋಮವಾರ ಪೇಟೆ | |
| • ಗುಂಡುಕಟ್ಟೆ | |
| • ಮಡಿಕೇರಿ, ಸಂಪಾಜೆ, ಸುಳ್ಯ | ದಿ. 24-02-1934 |
| • ಪುತ್ತೂರು, ಉಪ್ಪಿನಂಗಡಿ | |
| • ವಿಠಲಗಬ್ಬ, ಕಲ್ಲಡ್ಕ, ಪಾಣೆ | |
| • ಮಂಗಳೂರು, ಬಂಟ್ವಾಳ | |
| • ಮಂಗಳೂರು | |
| • ಮಂಗಳೂರು, ಗುರುಪುರ, ಬಜ್ಪೆ<br>ಯಕ್ಕೂರು, ಕಟೀಲು, ಕಿನ್ನಗೋಳಿ<br>ಮೂಲ್ಕಿ, ಪಡುಬಿದ್ರಿ, ಕಾಟಪಾಡಿ<br>ಗುರುಪುರ, ಉದ್ಯಾವರ<br>ಉಡುಪಿ, ಬ್ರಹ್ಮಾವರ, ಸಿದ್ದಾಪುರ | ದಿ. 25-02-1934 |
| • ಕುಂದಾಪುರ | ದಿ. 26-02-1934 |
| • ಕುಂದಾಪುರ, ಭಟ್ಕಳ<br>ಹೊನ್ನಾವರ, ಕಾರವಾರ | ದಿ. 27-02-1934 |
| • ಕಾರವಾರ, ಕುಮುಟಾ, ಅಂಕೋಲ<br>ಚಂದಿಯಾ, ಶಿರಸಿ | ದಿ. 28-02-1934 |
| • ಶಿರಸಿ, ಸಿದ್ದಾಪುರ, ದಾಸನಕೊಪ್ಪ<br>ಇಸಲೂರು, ಏಕಾಂಬಿ, ಆಲೂರು<br>ಬ್ಯಾಡಗಿ, ಮೋಟೆಬೆನ್ನೂರು | ದಿ. 01-03-1934 |
| • ಹಾವೇರಿ, ರಾಣೆಬೆನ್ನೂರು, ಹರಿಹರ<br>ದಾವಣಗೆರೆ, ಹರಪನಹಳ್ಳಿ, ಕೊಟ್ಟೂರು<br>ಕೂಡ್ಲಿಗೆ, ದುಗ್ಗಾವತಿ, ಕಣಿವೆಹಳ್ಳಿ<br>ಸೊಂಡೂರು | ದಿ. 02-03-1934 |

| | |
|---|---|
| • ಸೊಂಡೂರು, ಬಳ್ಳಾರಿ, ಹೊಸಪೇಟೆ ಭಾನಾಪುರ, ಗದಗ, ಜಕ್ಕಲಿ, ಹುಬ್ಬಳ್ಳಿ | ದಿ. 03-03-1934 |
| • ಹುಬ್ಬಳ್ಳಿ, ಧಾರವಾಡ, ಅಮ್ಮಿನಭಾವಿ ಹಿರೇಉಳ್ಳಗೇರಿ, ಬೈಲಹೊಂಗಲ ಉಪ್ಪಿನ, ಬೆಟಗೇರಿ, ಸೌಂದತ್ತಿ ಸಂಪಗಾಂವ್, ಹೊಸೂರು, ಬೆಳಗಾವಿ | ದಿ. 04-03-1934 |
| • ಬೆಳಗಾವಿ | ದಿ. 05-03-1934 |
| • ಬೆಳಗಾವಿ | ದಿ. 06-03-1934 |
| • ಬೆಳಗಾವಿ, ಯಮಕನಮರಡಿ ಹುಕ್ಕೇರಿ, ಗೋಕಾಕ, ಸಂಕೇಶ್ವರ ನವಲೀಹಾಳ, ಚಿಕ್ಕೋಡಿ, ಅಂಕಲಿ | ದಿ. 07-03-1934 |
| • ಶೆಡಬಾಳ, ಬನಹಟ್ಟಿ, ಅಥಣಿ ಬಿಜಾಪುರ (ವಿಜಯಪುರ), ತಿಕೋಟ, ತೊರವಿ ಇಳಕಲ್ | ದಿ. 08-03-1934 |
| • ನಂದಿ ಬೆಟ್ಟ | 10-05-1936 ರಿಂದ 30-05-1936 ರವರೆಗೆ |
| • ಚಿಕ್ಕಬಳ್ಳಾಪುರ, ಶಿಡ್ಲಘಟ್ಟ, ಚಿಂತಾಮಣಿ ಕೋಲಾರ, ಬಂಗಾರ ಪೇಟೆ, ಕೆ. ಜಿ. ಎಫ್ | 31-05-1936 |
| • ಬೆಂಗಳೂರು | 01-06-1936 ರಿಂದ 12-06-1936 ರವರೆಗೆ |
| • ಬೆಳಗಾವಿ ಜಿಲ್ಲೆಯ ಹುದಲಿ | 16-04-1937 ರಿಂದ 21-04-1937ರವರೆಗೆ |

## ಏಕಾದಶ ವ್ರತಗಳು

| | |
|---|---|
| ಸತ್ಯ | **Truth** |
| ಅಹಿಂಸೆ | **Ahimsa or Love** |
| ಅಸ್ತೇಯ (ಕದಿಯದಿರುವುದು) | **Non-Stealing** |
| ಬ್ರಹ್ಮಚರ್ಯ | **Brahmacharya or Chastity** |
| ಅಸಂಗ್ರಹ (ಅಪರಿಗ್ರಹ) | **Non-Possession** |
| ಶರೀರ ಶ್ರಮ | **Physical Labour** |
| ಅಸ್ವಾದ (ನಾಲಿಗೆ ಚಪಲ) | **Control on the Palate** |
| ಸರ್ವತ್ರ ಭಯವರ್ಜನ (ಅಭಯ) | **Fearlessness** |
| ಸರ್ವಧರ್ಮ ಸಮಾನತ್ವ | **Equality of Religion** |
| ಸ್ವದೇಶಿ | **Swadeshi** |
| ಸ್ಪರ್ಶ ಭಾವನೆ (ಅಸ್ಪೃಶ್ಯತಾ ನಿವಾರಣೆ) | **Removal of Untouchability** |

---

## ಏಳು ಸಾಮಾಜಿಕ ಪಾತಕಗಳು Seven Social Sins

| | |
|---|---|
| ತತ್ವರಹಿತ ರಾಜಕಾರಣ | **Politics without Principles** |
| ದುಡಿಮೆ ಇಲ್ಲದ ಸಂಪತ್ತು | **Wealth without Work** |
| ಆತ್ಮಸಾಕ್ಷಿ ಇಲ್ಲದ ಸಂತೋಷ | **Pleasure without Conscience** |
| ಚಾರಿತ್ರ್ಯವಿಲ್ಲದ ಶಿಕ್ಷಣ | **Education without Character** |
| ನೀತಿ ಇಲ್ಲದ ವ್ಯಾಪಾರ | **Commerce without Morality** |
| ಮಾನವೀಯತೆ ಇಲ್ಲದ ವಿಜ್ಞಾನ | **Science without Humanity** |
| ತ್ಯಾಗ ಇಲ್ಲದ ಪೂಜೆ | **Worship without Sacrifice** |

– ಮಹಾತ್ಮ ಗಾಂಧೀಜಿ

## ಹದಿನೆಂಟು ರಚನಾತ್ಮಕ ಕಾರ್ಯಗಳು
## 18 CONSTRUCTIVE PROGRAMMES

| | |
|---|---|
| ಮತೀಯ ಐಕ್ಯತೆ | **Communal Unity** |
| ಅಸ್ಪೃಶ್ಯತಾ ನಿವಾರಣೆ | **Removal of Untouchability** |
| ಪಾನನಿರೋಧ | **Prohibition** |
| ಖಾದಿ | **Khadi** |
| ಇತರೆ ಗ್ರಾಮೋದ್ಯೋಗ | **Other village industries** |
| ಗ್ರಾಮ ನೈರ್ಮಲ್ಯ | **Village Sanitation** |
| ಮೂಲ ಶಿಕ್ಷಣ | **Basic Education** |
| ವಯಸ್ಕರ ಶಿಕ್ಷಣ | **Adult Education** |
| ಮಹಿಳಾ ಸಬಲೀಕರಣ | **Women Empowerment** |
| ಆರೋಗ್ಯ ಮತ್ತು ಶುಚಿತ್ವ ಶಿಕ್ಷಣ | **Hygiene & Health Education** |
| ಪ್ರಾದೇಶಿಕ ಭಾಷೆ | **Provincial Languages** |
| ರಾಷ್ಟ್ರಭಾಷೆ | **National Language** |
| ಆರ್ಥಿಕ ಸಮಾನತೆ | **Economic Equality** |
| ರೈತರ ಸಬಲೀಕರಣ | **Empowerment of Farmers** |
| ಕಾರ್ಮಿಕರ ಸಬಲೀಕರಣ | **Empowerment of Labourers** |
| ಆದಿವಾಸಿ ಸಬಲೀಕರಣ | **Tribal Empowerment** |
| ಕುಷ್ಠರೋಗ ನಿರ್ಮೂಲನೆ | **Cure of Lepracy** |
| ವಿದ್ಯಾರ್ಥಿ | **Students** |



ಭಾರತ ದೇಶದ ಸ್ವಾತಂತ್ರ್ಯಪೂರ್ವ ಇತಿಹಾಸ ಸಂಬಂಧಿತ ಕೃತಿಗಳ ಬರಗಾಲದ ನಡುವೆ ಅರಳಿ ಬಂದಿರುವ 'ಸಾಹಿತ್ಯ ತೆನೆ' ಶ್ರೀ ವೇಮಗಲ್ ಸೋಮಶೇಖರ್ ಅವರ ಕಿರುಹೊತ್ತಿಗೆ 'ಮಹದೇವ ದೇಸಾಯಿ'. ನಮ್ಮ ರಾಷ್ಟ್ರಪಿತ ಮಹಾತ್ಮ ಗಾಂಧಿ ಅವರ ಆಪ್ತ ಕಾರ್ಯದರ್ಶಿಯಾಗಿ ತಮ್ಮ ತನು-ಮನ-ಧನಗಳೆಲ್ಲವನ್ನೂ ರಾಷ್ಟ್ರಸೇವೆಗೆ ಸಮರ್ಪಿಸಿಕೊಂಡ ಮಹದೇವ ದೇಸಾಯಿ ಅವರ ಬದುಕು ಅನನ್ಯವಾದದ್ದು. ಇಂತಹ ಮಹಾನ್ ವ್ಯಕ್ತಿಯೊಬ್ಬರ ಅನುಕರಣಶೀಲವಾದ ಜೀವನ ಆದರ್ಶಗಳನ್ನು ಹಲವು ಪುಸ್ತಕಗಳ ಆಧಾರದಿಂದ ಸುಂದರ ಕೃತಿಯಾಗಿಸಿ ಸಾಹಿತ್ಯ ಸಹೃದಯರಿಗೆ ಸಮರ್ಪಿಸಿರುವ ಶ್ರೀ ವೇಮಗಲ್ ಸೋಮಶೇಖರ್ ಅವರ ನಡೆ-ನುಡಿಗಳು ಸಹ ನಮಗೆ ಪ್ರೇರಣದಾಯಿಯಾದದ್ದು.
ಲೇಖಕರು ತಮ್ಮ ವೃದ್ಧಾಪ್ಯದ ಹೊತ್ತಿನಲ್ಲಿ ರಚಿಸಿರುವ ಈ ಪುಸ್ತಕವು 'ಹೊಂಗಿರಣ'ವಾಗಿ ಮೂಡಿಬಂದಿದ್ದು ರಾಷ್ಟ್ರಸಾಹಿತ್ಯ ಪ್ರೇಮಿಗಳೆಲ್ಲರೂ ಪ್ರೋತ್ಸಾಹಿಸುವುದು ಅಗತ್ಯವಾದದ್ದು.

ಪ್ರೊ. ಕೆ. ಆರ್. ನರಸಿಂಹನ್
ಯಲಹಂಕ, ಬೆಂಗಳೂರು.

**ಕರ್ನಾಟಕ ಗಾಂಧೀ ಸ್ಮಾರಕ ನಿಧಿ**
**ಗಾಂಧೀ ಭವನ, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು**